# ನೆರೆಯ ಗಾಂಧಾರ

ಅಥವಾ

# ಅಫಘಾನ

ಸುಬ್ರಾವ್ ಕೃಷ್ಣ ಹೆಗಡೆ, ಕಾನಗೋಡ್, ಶಿರ್ಶಿ.

ಅಂತರಂಗ ಕಾರ್ಯಾಲಯ, ಉಡುಪಿ,

0--3--0

# ನೆರೆಯ - ಗಾಂಧಾರ

ಅಥವಾ

# ಅಫಘಾನ

(ಸೂಕ್ಷ್ಮ ಪರಿಚಯ)

ಲೇಖಕ:

ಸುಬ್ರಾವ್ ಕೃಷ್ಣ ಹೆಗಡೆ ಕಾನಗೋಡ್, ಶಿರ್ಶಿ.

ಮುದ್ರಕರು

ನವಯುಗ ಪ್ರೆಸ್, ಉಡುಪಿ.

0—4—0

ಅಂತರಂಗ ಕಾರ್ಯಾಲಯ, ಉಡುಪಿ.

# ಲೇಖಕನ ಮಾತು

ವಿಶಾಲ ಸಾಹಿತ್ಯಾಕಾಶದಲ್ಲಿ ಕಿರುಹೊತ್ತಿಗೆಯ ನಕ್ಷತ್ರಗಳನ್ನೆಳೆದು ಪ್ರಕಾಶಕ್ಕೆ ತರುವ ಅಂತರಂಗದವರ ಇಂಥ ನವೀನ ಸಾಹಸವು ಅಭಿನಂದನೀಯ; ಅನುಕರಣೀಯ.

ಭಾರತ—ಗಾಂಧಾರಗಳ ಉಜ್ವಲ ಸಂಸ್ಕೃತಿ ಸಂಬಂಧವನ್ನು ಸೂಕ್ಷ್ಮವಾಗಿ ನಿರೂಪಿಸುವ ಉದ್ದೇಶದಿಂದ ಅದರ ಜೀವನ ಕ್ಷೇತ್ರದ ಒಂದು ವಿಹಂಗಮ ನೋಟವು ಈ ಚಿಕ್ಕ ಹೊತ್ತಿಗೆಯ ರೂಪುಗೊಂಡಿದೆಯೇ ಹೊರತು, ಅಫಘಾನದ ಸ್ಥೂಲ ಪರಿಚಯವನ್ನು ಈ ಪುಟ್ಟ ಪುಸ್ತಕದಿಂದ ಮಾಡಲು ಅಸಾಧ್ಯ.

ಒಂದು ಭಾರತೀಯ ಭಾಗದ ಸಾರ ಪರಿಚಯಾತ್ಮಕವಾದ ಈ ಪುಸ್ತಕದಲ್ಲಿ ಸ್ವಾಭಾವಿಕವಾಗಿ ತೋರಬಹುದಾದ ತಪ್ಪುತಡೆಗಳನ್ನು ಮನ್ನಿಸುವ ಭಾರ ವಾಚಕಮಹಾಶಯರದೆಂದು ವಿನಂತಿಸುವ,

ತಮ್ಮವ

ಕಾಸರಗೋಡ್, ಶಿರ್ಶಿ. **ಸುಬ್ರಾವ್ ಕೃಷ್ಣ ಹೆಗಡೆ.**

# ನೆರೆಯ-ಗಾಂಧಾರ

## ಅಥವಾ

# ಅಪಘಾನ

ಬಳಿಯ ಬಾನಿನ ಸೊಬಗು ನೋಡಿ ಹುಚ್ಚೆದ್ದು ಹಾಯ್ದಂತಿರುವ ಹಚ್ಚ ಹಸುರಿನ ಗಿರಿಶೃಂಗಮಾಲೆ. ನಿಸರ್ಗ ಸುಂದರಿಯ ನೀಳವಾದ ಜಡೆಯಂತೆ ನಿಬಿಡವಾಗಿ ಹಬ್ಬಿಕೊಂಡ ದಟ್ಟಡವಿಯ ಪ್ರದೇಶ. ದಿಟ್ಟ ಹೆಣ್ಣಿನ ವನಸೀರೆಯ ಒಡಲಂಚಿನಲ್ಲಿ ನೇರಹಾಯ್ದ ಎಳೆಯಂತಿರುವ ಒಳಕೊಳ್ಳಗಳ ಸುಂದರ ಸಾಲು ನೋಟ. ಪ್ರಕೃತಿ ಮಾತೆಯು ಕುಲೀನತೆಯಿಂದ ತನ್ನ ಅಂತರ್ಭಾಗವನ್ನೆಲ್ಲ ಮುಚ್ಚಿಟ್ಟುಕೊಳ್ಳಲು ಸುತ್ತಲೂ ಹೊದೆದುಕೊಂಡ ದಟ್ಟಾದ ಗಿರಿಕಾನನ. ಪರಾಜಯದ ಸೋಂಕು ಕಾಣದೆ ಎದೆಗಾರಿಕೆಯುಳ್ಳ (ತುಸು ಹಿಂದುಳಿದ) ಗೋರಿಲ್ಲಾ ಯೋಧನಂತೆ ಇರುವ ದಿಟ್ಟ ನಿಲುವೆಯ ಪರ್ವತ ದುರ್ಗ. ವಿಶಾಲ ಭಾರತದ ಒಂದಂಗವೆನ್ನುವ ಮುದ್ರೆಯೊತ್ತಿಕೊಂಡು ಧಾರ್ಷ್ಟ್ಯವಾಗಿ ನಿಂತ ಸೀಮಾಂತ ಭೂಮಿ. ಭಾರತ-ರಶಿಯಾ—ಚೀನ-ಇರಾಣ ಮುಂತಾದ ಬೃಹದ್ರಾಷ್ಟ್ರಗಳ ಗಡಿನಿರ್ಮಿಸಿದ ಮಹಾ ಮಧ್ಯಸ್ಥನೆಂದು ಹೆಮ್ಮೆಯಿಂದ ಮೆರೆಯುವ ಪ್ರದೇಶ ಎಂದರೆ, ಹಿಂದಿನ ಗಾಂಧಾರ ಇಂದಿನ ಅಸಘಾನ ಎಂದು ಇತಿಹಾಸ ಬಲ್ಲವರೆಲ್ಲ ಸುಲಭವಾಗಿ ಊಹಿಸಿ ತಿಳಿವಂತಿದೆ.

ಗಾಂಧಾರವೆಂದರೆ ನಮ್ಮ ಭಾರತದ ವಾಯುವ್ಯ ತುದಿಯಲ್ಲಿ ಬೆಸೆದು ನಿಂತ ಭೂಭಾಗ. ಅನಾದಿ ವೈದಿಕ ಕಾಲದಿಂದ ಇಂದಿನ ವರೆಗೂ ಭಾರತಕ್ಕೆ ಪರಚಕ್ರ ಭೀತಿಯ ಮಹಾದ್ವಾರವೆನಿಸಿಕೊಂಡಿದೆ ಈ ಗುಡ್ಡಗಾಡು ಗಾಂಧಾರ. "ಗಾಂಧಾರ" ಎಂದ ಮಾತ್ರಕ್ಕೆ ಒಂದು ಬಗೆಯ ಅವ್ಯಕ್ತಭಾವನೆ ಮೂಡಬಹುದು. ಯಾಕಂದರೆ ಭಾರತ ಪುರಾಣ ಬಲ್ಲವರಿಗೆ ಈ ಶಬ್ಧವು ದುರ್ಯೋಧನನ ಕಾಲದ ರಾಜ್ಯ ಈಗೆಲ್ಲ ಎಂಬ ಭಾವನೆಗೂ ಅವಕಾಶವೀಯುವದು. ಆ ವಿಷಯ ತಿಳಿಯದವರಿಗೆ ಈ ಅಜ್ಞಾತ ಗಾಂಧಾರ ಯಾವದೋ ಏನೋ ಎಲ್ಲಿಯೊ ಎಂತಾಗ

ಬಹುದು. ಆದ್ದರಿಂದ ಈ ಅಜ್ಞಭಾವ ವಿಚಿತ್ರ ಕಲ್ಪನೆಗಳ ದ್ವಂದ್ವಕ್ಕೆ ವಸ್ತುಸ್ಥಿತಿಯಂತೆ ನೂತನ ಪರಿಚಯಾತ್ಮಕ ಸಮಾಧಾನವು ಅತ್ಯವಶ್ಯ ವಾಗಿದೆ.

ಗಾಂಧಾರವೊಮ್ಮೆ ಆರ್ಯನಾಗರೀಕತೆಯ ಪ್ರಭಾವದಲ್ಲಿ ಭಾರತ ದಂತೆ ಉಜ್ವಲವಾಗಿ ಬೆಳಗಿ ಬಾಳಿದ ದೇಶ. ಎಂದರೆ ಅದರ ಆದ್ಯಂತ ಇತಿಹಾಸ ಜೀವನವನ್ನು ಸೂಕ್ಷ್ಮ ರೀತಿಯಲ್ಲಾದರೂ ತಿಳಿಯಲು ನಮ್ಮ ಕುತೂಹಲ ದೃಷ್ಟಿಯರಳದೆ ಇರದು. ಇದಕ್ಕೆ ತಕ್ಕ ಸಾಮಾನ್ಯ ಪರಿಶೀಲನೆಯ ತೃಪ್ತಿಯನ್ನು ಯಥಾವಕಾಶ ಪಡೆಯಲು ಆ ಕಡೆಗೆ ಹೊರಳೋಣ.

## ವೈದಿಕ ಕಾಲ

ಆರಂಭ ವೈದಿಕ ಕಾಲದಲ್ಲಿ ಗಾಂಧಾರವು ಆರ್ಯ ಭೂಮಿ ಯಾಗಿತ್ತು. ಗೌತಮನಂಥ ಪ್ರಭಾವಿಗಳಾದ ಆರ್ಯ ಋಷಿಗಳ ಆಶ್ರ ಮವು ಕೆಲಕಾಲ ಗಾಂಧಾರವಾಗಿತ್ತೆಂಬದು ಕೆಲವು ಇತಿಹಾಸ ಪಂಡಿ ತರ ತಿಳುವಳಿಕೆಯಲ್ಲಿದೆ. ಇಂದಿನ ಸಂಶೋಧನೆಯಂತೆ ಆರ್ಯರು ಮಧ್ಯ ಏಶಿಯಾದಿಂದ ಹೊರಚಿಮ್ಮಿದ ಜನಾಂಗ. ವ್ಯಾಪಕಶೀಲವಾದ ಈ ಜನಾಂಗವು ಭಾರತಕ್ಕೆ ಕಾಲಿಡುವ ಮುನ್ನ, ಪ್ರಥಮ ದ್ವಾರವಾದ ಗಾಂಧಾರದಲ್ಲಿಯೇ ಕೆಲಕಾಲ ನಿಲ್ಲುವಂತಾಯಿತು. ಪ್ರಶಾಂತವಾದ ಕುಮಾ—ಗೋಮತೀ ಮುಂತಾದ ನದೀ ತೀರಗಳ ಆಶ್ರಯದಲ್ಲಿ ಗೌತಮನಂಥವರ ಆಶ್ರಮ ಕಂಗೊಳಿಸಿತು. ಆರ್ಯರ ವಾಡಿಕೆಯಲ್ಲಿ ಗಾಂಧಾರ ಭೂಮಿಯು "ಉರ್ಬರ" ಎಂಬ ಹೆಸರಿನದಾಗಿತ್ತು. ಅಂದಿನ ಅಂದರೆ ವೈದಿಕ ಕಾಲದ ಕುಮಾ—ಗೋಮತೀ ಮುಂತಾದ ನದಿಗಳು ಇಂದು ಕಾಬೂಲ—ಗೋಮಾಲ ಮುಂತಾದ ಹೆಸರಿನಿಂದ ಹರಿಯು ತ್ತಿವೆ. ಆರ್ಯ ಪರಂಪರೆಯು ಸುಮಾರು ಕಾಲದ ವರೆಗೆ ಗಾಂಧಾ ರವನ್ನು ಮಾತೃ ಭೂಮಿಯೆಂದು ಹಾಡಿರುವದು. ಈ ಪೀಳಿಗೆ ಬೆಳೆ ದಂತೆ ಕ್ರಮೇಣ ವ್ಯಾಪಿಸುತ್ತ ಹೆಸರಾಂತ "ಖೈಬರ" ಎಂಬ ಕಣಿವೆ ದಾಟಿ ಸಿಂಧ ಪಂಜಾಬಗಳ ಬಯಲು ಭೂಮಿಯಲ್ಲಿ ನೆಲಸು

ವಂತಾಯಿತು. ಅಂತೂ ಇಂದಿನ ಅಪಘಾನವೊಮ್ಮೆ ಉರ್ಬರ ಹೆಸರಿನಿಂದ ಕುಮಾ–ಗೋಮತೀ ಮುಂತಾದ ನದೀ ಪ್ರಾಂತಗಳ ನ್ನೊಳಗೊಂಡು ಆರ್ಯ ಭೂಮಿಯಾಗಿತ್ತೆಂದರೆ ಒಂದು ಬಗೆಯ ಆಶ್ಚರ್ಯವೇ ಸರಿ.

## ಪುರಾಣ ಕಾಲ

ವೇದಕಾಲದಲ್ಲಿ ಅಶ್ರಮ ಭೂಮಿಯಾಗಿದ್ದ “ಉರ್ಬರವು” ಪುರಾಣ ಕಾಲದಲ್ಲಿ ರಾಜಕೀಯ ಪ್ರದೇಶವಾಗಿ ಗಾಂಧಾರ ಎನ್ನಿಸಿತು. ಈ ಗಾಂಧಾರ (ಕಂದಹಾರ) ನಗರವೇ ಶೂರ ಕ್ಷಾತ್ರ ಜನಾಂಗದ ರಾಜ ಧಾನಿ. ಆದ್ದರಿಂದ ಅದರ ಆಳ್ವಿಕೆಗೊಳಪಟ್ಟ ಭೂಭಾಗವೆಲ್ಲ ಗಾಂಧಾರ ಎಂತೇ ಆಗಿ, ಕ್ರಮೇಣ ಕಂದಹಾರವಾಯಿತು. ಭಾರತ ಕಾಲದ ದುರ್ಯೋಧನ ಬಂಧುಗಳಿಗೆ ಗಾಂಧಾರವು ಅಜ್ಜನ ಮನೆ. ಪತಿವ್ರತಾ ಶಿರೋಮಣಿ ಸುಂದರೀಮಣಿಯಾದ ಗಾಂಧಾರಿಯು ಗಾಂಧಾರದ “ಸುಬಲ” ರಾಜನ ನಂದಿನಿ. ಹೆಸರಾಂತ ತಂತ್ರಗಾರ ಶಕುನಿಯ ಭಗಿನಿ. ಗಾಂಧಾರ–ಹಸ್ತಿನಾ ನಗರಿಯ ಅಂದರೆ ಅಪಘಾನ-ದಿಲ್ಲಿಗಳ ಈ ಸಂಬಂಧದಿಂದ ಭಾರತೇತಿಹಾಸದ ಬೆಳವಣಿಗೆಗಾರಂಭ.

ಗಾಂಧಾರರು ಎಂಥ ಯೋಧಾ ಜನಾಂಗವೆಂಬದು ಇತಿಹಾಸ ಪ್ರಸಿದ್ಧ. ಒಮ್ಮೆ ದುರ್ಯೋಧನನು ಅವರ ಸಾಹಸ-ಶಕ್ತಿ-ದಿಟ್ಟತನ–ಕಾರ್ಯಕ್ಷಮತೆಗಳಿಗೆ ತತ್ತರಿಸಿ ಸ್ವತಃ ಬೊಟ್ಟು ಕಚ್ಚಿದ್ದಾನೆ. ಮಾವಂದಿರೊಡನೆ ವಿಹಾರಕ್ಕೆಂದು ಹೋದಾಗ ದಾರಿಯಲ್ಲಿ ತುಸು ಬಲ ವಾಗಿ ಎಡವಿದ್ದರಿಂದ ಹಠಾತ್ತಾಗಿ ಗುಡ್ಡದಂಥ ಬಂಡೆಯನ್ನು ಲೀಲೆ ಯಿಂದ ಕಿತ್ತುರುಳಿಸಿದ ದೃಶ್ಯವು ದುರ್ಯೋಧನನಿಗೆ ಅಚ್ಚರಿಯಾಯಿತು. ಸೇಡು ತೀರಿಸುವಲ್ಲಿ ಕಗ್ಗಲ್ಲನ್ನೂ ಬಿಡದಂಥ ಈ ದಿಟ್ಟ ಜನಾಂಗವು ಮನಸ್ಸು ಮಾಡಿದರೆ ಹಸ್ತಿನಾನಗರಿಯ ಭಾರತ ಸಿಂಹಾಸನವನ್ನು ಬುಡಮೇಲು ಮಾಡಲು ಹೆಚ್ಚುಕಾಲ ಬೇಡ. ಉಪಾಯಾಂತರದಿಂದ ಗಾಂಧಾರರನ್ನು ಅಂಕಿತಗೊಳಿಸಿದರೆ ಮಾತ್ರ ನಮ್ಮ ಉಳಿಗಾಲಕ್ಕೆ ನಿರಾತಂಕ ಎನ್ನುವ ಧುರ್ಯೋಧನನ ವಿಚಾರವೆರಡೂ ಸತ್ಯವಾಯಿತು,

ಹೇಗೆಂದರೆ ದುರ್ಯೋಧನನ ಉಪಾಯಾಂತರಗಳಿಂದ ಗಾಂಧಾರದ ಸುಬಲರೂ ಹತಬಲರಾದರು. ಶಕುನಿಯ ಪ್ರತಿ ಸೇಡಿನ ಮಹಾ ತಂತ್ರದಲ್ಲಿ ದುರ್ಯೋಧನನ ಬಳಗವೂ ಧ್ವಂಸವಾಯಿತು.

ಕಪಟತಂತ್ರ, ಧೂರ್ತವಿಚಾರ, ವಿಶ್ವಾಸಘಾತಕತನ ಮುಂತಾದ ಶಕುನಿಯ ಸ್ವಭಾವವೆಲ್ಲಾ ಅಂದಿನ ಸಮಗ್ರ ಗಾಂಧಾರ ಸಂಸ್ಕೃತಿಯ ನಿಜವಾದ ಪ್ರತೀಕವಲ್ಲ. ಅಲ್ಲಿಯ ಜನಸಾಮಾನ್ಯ ಸಂಸ್ಕೃತಿಯು ಇಷ್ಟು ಕೀಳಾಗಿರದೆ ಸಾಮಾನ್ಯ ಉಚ್ಚಮಟ್ಟದ್ದೆಂದು ಹೇಳುವಂತಿದೆ. ನೋವನ್ನು ಸೇಡಿನ ಮೂಲಕ ತೀರಿಸಿಕೊಳ್ಳುವ ಹಟ–ಸಾಹಸ ಇಷ್ಟು ಮಾತ್ರ ಇವರ ಸಾಹಸಗುಣ. ಶೀಲವಂತೆ ಗಾಂಧಾರಿಯು ಅಂಥ ರಾಜನ ರಾಣಿಯಾಗಿದ್ದರೂ ಕುಲಶೀಲ ಅಕಲಂಕಿತವಾಗಿಯೇ ಇದೆ. ಆವಳಲ್ಲಿ ಕಾಣುವ ಭಾರತ ನಾರಿಯರ ಆದರ್ಶ ಸಂಸ್ಕೃತಿಯು ಭಾರತ-ಗಾಂಧಾರಗಳ ಸಂಸ್ಕೃತಿ ಸಾಮ್ಯವನ್ನು ಪೂರ್ಣ ಪ್ರತಿಬಿಂಬಿಸುವದು. ಆ ಕಾಲದ ಬಾಹ್ಲೀಕವೆಂಬ ಪುಟ್ಟ ರಾಜಕೀಯ ಪ್ರದೇಶವು ಈ ಗಾಂಧಾರದ ಅಂತರ್ಗತ ಭಾಗವಾಗಿತ್ತೆಂದು ತಿಳಿಯುವದು. ಅದನ್ನು ಇಂದು "ಬಲಖ" ಎಂದು ಕರೆಯುತ್ತಿದ್ದೇವೆ. ಈ ಬಲಖವು ಬಾಹ್ಲೀಕ ಎಂಬ ಚಿಕ್ಕ ರಾಜ್ಯವೇ ಆಗಿ ಗಾಂಧಾರ ಸಂಸ್ಕೃತಿಗೆ ಅಭಿನ್ನವಾಗಿತ್ತು. ಇವೆಲ್ಲ ಭಾರತದ ಒಂದಂಗವೆನ್ನುವ ಭಾವನೆ ಮಾತ್ರ ಬೇರೆಯಾಗಲಿಲ್ಲ. ಈ ಸಮಯದಲ್ಲಿ ಗಾಂಧಾರದ ಸೀಮಾಂತವನ್ನು ನಿರ್ದೇಶಿಸುತ್ತ "ವಕ್ಷು" ಎಂಬ ನದಿಯು ನಿಧಾನವಾಗಿ ಹರಿಯುತ್ತಿತ್ತು. ಈಗ ಗ್ರೀಕರಿಂದ ಆ ನದಿಯು "ಆಕ್ಸಸ್" ನಾಮಾಂಕಿತವಾಗಿ ಹಿಂದಿನ ನೆನಪು ಕೊಡುತ್ತಿದೆ.

## ಇತಿಹಾಸ ಕಾಲ

ಗಾಂಧಾರದ ಮೇಲೆ ದಂಡಯಾತ್ರೆಯಿಂದ ವಿಜಯ ಪತಾಕೆ ನಿಲ್ಲಿಸಿರುವದು ಇತಿಹಾಸದಲ್ಲಿ ತುಸು ವಿರಳ. ಗುಡ್ಡಗಾಡು ಹಳ್ಳ ಕೊಳ್ಳ ಕಣಿವೆ ಮಾರ್ಗ ಮುಂತಾದ ವಿಶಿಷ್ಟ ಕಾರಣಗಳಿಂದ ಸೇನಾ ಪ್ರವೇಶಕ್ಕೇ ದುರ್ಗಮವಾದದ್ದು ಗಾಂಧಾರ. ಇಲ್ಲಿಯ ನಿಸರ್ಗ

ದುರ್ಗದಲ್ಲಿ ಇಳಿಯುವ ಸಾಹಸ ಮಾಡಿದರೂ ದಿಟ್ಟ ಗಾಂಧಾರರ ಗಟ್ಟಿಗತನ—ಕೂಟ ಯುದ್ಧಗಳ ಮುಂದೆ ಎಂಥ ಪ್ರಬಲ ಸೈನ್ಯವೂ ಹಿಮ್ಮೆಟ್ಟದಿರದು. ಅಲ್ಲಿಯ ನಿಸರ್ಗದೊಲವೇ ಹಾಗಿದೆ. ಆವರಿಗೆ ಇತರ ರಂತೆ ವೀರ ಸ್ವರ್ಗದ ಕಲ್ಪನೆಯೂ ಇಲ್ಲ. ಕಷ್ಟ-ನಷ್ಟ-ಅಂಜುಬುರುಕು ತನ ಮುಂತಾದವಂತೂ ತೀರ ವಿರುದ್ಧ. ಸಹಿಷ್ಣುತೆಯಲ್ಲಿ ಒಂದು ಗಣ್ಯ ಜನಾಂಗವೆನ್ನಬಹುದು. ಕೂಟ ಯುದ್ಧದ ಕ್ರಮವಂತೂ ಅತಿ ವಿಚಿತ್ರ. ಒಂದು ಸಣ್ಣ ಗುಂಪು ಎಂಥ ದೊಡ್ಡ ಸೈನ್ಯವನ್ನಾದರೂ ಕಣಿವೆಯ ಸುರಂಗದಲ್ಲಿ ಸುಲಭವಾಗಿ ಹೂಳಿ ಮುಚ್ಚಬಲ್ಲದು. ವೈರಿ ಸೇನೆಯು ನೀರನ್ನೂ ಕಾಣದೆ ಒಣಗುವಂತೆ ಹರಿಯುವ ಹಳ್ಳ ಕೊಳ್ಳಗಳನ್ನೆಲ್ಲ ಅರುವಿ ದೂರ ಹಾಯಿಸಿ ಬಿಡುವದು. ಇದು ಗಾಂಧಾರದ ಸೈನಿಕ ಲಕ್ಷ್ಣ ಣದ ಮೂಲ ಕ್ರಮ. ತೋಪು ತುಬಾಕಿಗಳಿಂದ ಕಲ್ಲು ಸೊಟ್ಟ ಮುಂತಾದವುಗಳಿಂದಲೇ ಹೆಚ್ಚಾಗಿ ಪ್ರಯೋಜನ ಪಡೆಯುವ ಈ ಸೈನಿಕ ಶಿಕ್ಷಣವು ಗಾಂಧಾರರಿಗೆ ನಿಸರ್ಗ ರಾಣಿಯಿಂದ ವಿಶೇಷವಾಗಿ ದೊರೆಯುವದೆಂದರೆ ತಪ್ಪಾಗದು. ಆದ್ದರಿಂದ ಗಾಂಧಾರರು ಹೆಚ್ಚಿನ ಆಕ್ರಮಣ ಕಂಡವರಲ್ಲ. ಈ ಕಾರಣವಾಗಿ ಹುಟ್ಟಾ ಸ್ವತಂತ್ರತೆಯು ಆವರ ಜೀವನವನ್ನು ಚೆನ್ನಾಗಿ ಅಂಟಿಕೊಂಡಿದೆ.

ಇಷ್ಟು ಸ್ವತಂತ್ರ ಮನೋವೃತ್ತಿಯ ಶೂರ ಗಾಂಧಾರರಿಗೆ ಹೆದರದೆ ಗಾಂಧಾರದ ಗಿರಿದುರ್ಗದ ಮೇಲೆ ಭಾರತ ಪತಾಕೆ ಹಾರಿಸಿ ದವರೆಂದರೆ ಮೌರ್ಯ ಸಮ್ರಾಟರೇ ಸರಿ. ಇದಾದರೂ ಕಾರಣಾಂತರ ದಿಂದ ಎನ್ನಬಹುದು. ಮುಂದೆ ಅಶೋಕನ ಕಾಲದಿಂದ ಬೌದ್ಧ ರಾಜ ಕೀರಿಟವನ್ನು ಅಫಘಾನರು ಒಪ್ಪಬೇಕಾಯಿತು. ಕ್ರಮೇಣ ಕ್ಷೀಣ ಗೊಂಡ ಮೂಲ ಸಂಸ್ಕೃತಿಯು ಮೇಲೆ ದೂರದಿಗಂತದ ವರೆಗೂ ಜ್ವಲಿ ಸುತ್ತಿರುವ ಬೌದ್ಧ ಧರ್ಮದ ಪ್ರಭಾವ ಬೀಳಲು ಶ್ರಮವಾಗಲಿಲ್ಲ. ಬುದ್ಧ ಧರ್ಮವು ಗಾಂಧಾರದಲ್ಲಿ ಪ್ರಬಲವಾಗಿ ಬೆಳೆಯಿತು. ಕೆಲಕಾಲದಲ್ಲಿ ಗ್ರೀಸ್ ಮುಂತಾದೆಡೆಯ ಯುವಾನರ ಕ್ರಾಂತಿಗೂ ಕಡಿಮೆಯಾಗಲಿಲ್ಲ. ಆದರೆ ಅದು ಹೆಚ್ಚು ಕಾಲ ನಿಲ್ಲದೆ ಪುನಃ ಕುಶಾನ ಮುಂತಾದ ರಾಜರಿಂದ ಸುರಕ್ಷಿತವಾಯಿತು.

ಒಳ್ಳೇ ಕುಶಾಗ್ರಬುದ್ಧಿಯ ಈ ಕುಶಾನು ವಂಶೀಯರ ಆಳಿಕೆಯಲ್ಲಿ ಅಫಘಾನದ ಜೀವನವು ಅತ್ಯುಚ್ಚ ಮಟ್ಟವೇರಿತ್ತು. ಆ ವರೆಗಿನ ರಾಜಧಾನಿ ಕಾಬೂಲ ಕಂದಹಾರಗಳನ್ನು ಬಿಟ್ಟು ಈ ರಾಜರು ಸರಹದ್ದಿ ಪ್ರಾಂತದ ಪೇಶವರವನ್ನೆ ಮುಖ್ಯ ರಾಜಕೀಯ ಕೇಂದ್ರವನ್ನಾಗಿ ನಿರ್ಮಿಸಿದ್ದರು. ನಂತರ ಪುನಃ ಗುಪ್ತವಂಶದ ಉದಯದಿಂದ ವೈದಿಕಧರ್ಮವು ಗಾಂಧಾರದಲ್ಲಿ ತಲೆಯೆತ್ತಿತು. ಪ್ರತಿಯಾಗಿ ಬುದ್ಧ ಧರ್ಮವು ಪಾತವಾಯಿತು. ಈ ಸಮಯದಲ್ಲಿ ಪೇಶಾವರದಿಂದ ಕಾಬೂಲ ಕಂದಹಾರಗಳನ್ನು ಹಾಯ್ದು ಗಿರ್ಝನಿಯ ಕೊನೆಯ ತನಕವೂ ಭಾರತದ ಅಂತರ್ಗತ ಗಾಂಧಾರವೆಂದು ಎಣಿಸಲಾಗಿತ್ತು. ಹೀಗೆ ಪ್ರಸಿದ್ಧ ಚೀನಾ ಪ್ರವಾಸಿ ಹುಯೆನ್‌ತ್ಸಾಂಗನ ಉಲ್ಲೇಖ—ನಂತರ ಕ್ರಮಕ್ರಮವಾಗಿ ಅಫಘಾನವು ಇಸ್ಲಾಮದಿಂದ ವ್ಯಾಪಕವಾಯಿತು. ಅನಾದಿ ವೈದಿಕ ಕಾಲದಿಂದ ಎಂಟನೆಯ ಶತಮಾನದ ವರೆಗೂ ಆರ್ಯ ಸಂಸ್ಕೃತಿಯ ನೆಲೆಯಾಗಿ ನಿಂತ ಗಾಂಧಾರಾವು ಪೂರ್ಣ ಇಸ್ಲಾಮಕ್ಕೊಳಗಾಗಲು ಒಂದು ಘನಿಷ್ಟ ಘಟನೆಯು ಚಾರಿತ್ರಿಕವಾಗಿಯೇ ಕಾಣುವಂತಿದೆ.

ಭಾರತವು ಶಂಕರಾಚಾರ್ಯರ ವೈದಿಕಧರ್ಮದ ಉಜ್ವಲ ಛಾಯೆಯಿಂದ ಆವೃತವಾಗಿ ಬೆಳಗುವ ಕಾಲ. ಆಗ ವೈದಿಕ ಧರ್ಮ ಪ್ರಚಾರಕರು ಗಾಂಧಾರವನ್ನೂ ಪ್ರವೇಶಿಸಿದರು. ವೈದಿಕರ ತಾತ್ವಿಕ ವಿಚಾರ ಪ್ರಣಾಲಿಯಲ್ಲಿ ಇಲ್ಲಿಯ ಬೌದ್ಧರು ಸೋತು ಒಂದು ಬಗೆಯ ಅತೃಪ್ತಿಯಿಂದ ರೋಸಿ ಹೋದರು. ಈ ಪರಿಣಾಮವು ಬೌದ್ಧರನ್ನು ವೈರಶೋಧನೆಗೆಳೆಯಿತು. ವೈದಿಕರ—ಮತ್ತು ಬೌದ್ಧರ ಈ ತಾತ್ವಿಕ ಹೋರಾಟವು ಯುದ್ಧಾಕ್ರಮಣದ ಭೀಕರ ರಂಗವಾಯಿತು. ಬೌದ್ಧರು ರೊಚ್ಚಿನಿಂದ ಇಸ್ಲಾಮವನ್ನು ಕೂಡಿಕೊಂಡು ಪ್ರತೀಕಾರದ ಬೆಂಕಿಯುರಿಸಿದ್ದರಿಂದ ಉಜ್ಜಲ ಗಾಂಧಾರ ಜೀವನವು ಜರ್ಜರಿತವಾಯಿತು. ನಂತರ ವೈದಿಕ—ಬೌದ್ಧ ಈ ಎರಡೂ ಅಳಿಗಾಲದ ದುರಂತ ಕಾಣಬೇಕಾಯಿತು. ಆಗ ಅಲ್ಲಿ ಇಸ್ಲಾಮಕ್ಕೆ ಬೆಳೆಯಲು ಅನುಕೂಲವಾಯಿತು. ಉಚ್ಚ ತರದ ತಾತ್ವಿಕ ಹೋರಾಟವು ಗುರಿತಪ್ಪಿ ಹೀಗೆ ದುರಂತದಲ್ಲಿ ಕೊನೆಗಂಡದ್ದು ನಿಜವಾಗಿ ಶೋಚನೀಯ. ಇಬ್ಬರ ಜಗಳ ಮೂರನೆ

ಯುವನಿಗೆ ಲಾಭ ಎನ್ನುವ ಹಾಡಿನಂತೆ ಗಾಂಧಾರವು ಅಂದಿನಿಂದ ಇಸ್ಲಾಮುದ ಆಳಿಕೆಗೊಳಪಟ್ಟಿತು. ಅಂದಿನಿಂದ ಭಾರತದೊಡನಿದ್ದ ರಾಜಕೀಯ ಸಾಂಸ್ಕೃತಿಕ ಸಂಬಂಧವೂ ಸಡಿಲಾಯಿತು. ಬದಲಾಗಿ ಪ್ರತ್ಯೇಕ ರಾಜ್ಯ ಭಾವನೆಯೂ ಬೆಳೆಯುಲಾರಂಭಿಸಿತು. ಹೀಗೆ ಅಪಘಾನವೊಂದು ಇಸ್ಲಾಮಕ್ಕೆರವಾದ್ದರಿಂದ ಭಾರತಕ್ಕೆ ಅರಬ್-ಪಠಾಣ-ಮೊಗಲ ಮುಂತಾದ ಆಕ್ರಮಣಗಳ ಹೆದ್ದಾರಿಯಾಯಿತು. ಇದು ಬಿನ್ನತೆಯಿಂದಾದ ಅಪಾರ ಹಾನಿ. ತಾತ್ವಿಕ ಗೊಂದಲವು ಮೇರೆ ಮೀರಿದ್ದರಿಂದ ಒಂದು ಪಕ್ಷವು ತಾನಾಗಿ ಇಸ್ಲಾಮುದ ಸಹಾಯ ಬಯುಸಿದಾಗ ಪರಿಸ್ಥಿತಿಯೇನಾಗಬಲ್ಲದು. ಕೆಲಬೌದ್ಧರಂತೂ ಈ ಯತ್ನದಲ್ಲಿ ಇಸ್ಲಾಮುದ ಮನವೊಲಿಸಲು ಆ ಧರ್ಮವನ್ನು ಸ್ವೀಕರಿಸಲೂ ಹಿಂದಾಗಲಿಲ್ಲ. ಇಷ್ಟೊಂದು ಒಡಕಿನಲ್ಲಿ ರಾಜ್ಯ ಸಂಸ್ಕೃತಿ ಮುಂತಾದವು ಒಂದಾಗಿ ಗಟ್ಟಿಯಾಗಿ ಬಾಳುವದೆಂತು. ಇಸ್ಲಾಮುದ ಪ್ರಬಲತೆಯಿಂದ ಎರಡು ಪಕ್ಷವೂ ಅಳಿದಿದ್ದಲ್ಲದೆ, ಭಾರತದಂಥ ಭವ್ಯ-ಅಖಂಡ ರಾಷ್ಟ್ರವೂ ಗಾಂಧಾರದಿಂದ ಅಂಗಭಿನ್ನವಾಗಿ ದುರಂತ ಆಕ್ರಮಣ ಸಹಿಸಬೇಕಾಯಿತು. ಇದು ಸಣ್ಣ ಅಂಗಕ್ಕೆ ತಾಗಿದ ರೋಗವನ್ನು ಇಡೀ ಶರೀರವೂ ದೊಡ್ಡ ಪ್ರಮಾಣದಿಂದ ಸಹಿಸಿದಂತಾಯಿತು. ಒಂದು ಬೆರಳು ಕಡಿದರೂ ದೇಹ ಊನವಾಗುವಂತೆ ಭಾರತ-ಗಾಂಧಾರದ ಅನಾದಿ ನಿಸರ್ಗ ಸಂಬಂಧವು ಹಲವು ರೀತಿಯಿಂದ ಹರಿದುಹೋಯಿತು.

ಒಟ್ಟಾರೆ ಒಡಕಿನ ಕೊಳೆಯು ಅನಾದಿಯಿಂದಲೂ ಭಾರತದ ರಾಜ್ಯಾಂಗವನ್ನು ಆಕ್ರಮಣ-ಹಿಂಸೆ-ದಾಸ್ಯ ಮುಂತಾದ ಮಹಾ ರೋಗಗಳಿಂದ ರೂಪುಗೆಡಿಸುತ್ತ ದುರಂತ ಇತಿಹಾಸ ಚಿತ್ರಿಸುತ್ತಲೇ ಬಂದಿದೆ.

## ಸ್ವತಂತ್ರತೆ

ಇಸ್ಲಾಮ್ ದಾಳಿಯ ಬಿರುಗಾಳಿಯು ಅಪಘಾನದ ಮೇಲಿಂದ ದಿಲ್ಲಿ—ದಿಲ್ಲಿಯಿಂದ ದೂರದ ಹಳ್ಳಿಯ ತನಕ ಹಾಯ್ದು ಅಪ್ಪಳಿಸುತ್ತಿದ್ದರೂ ಅಪಘಾನದ ಸ್ವತಂತ್ರತೆಗೆ ಅಷ್ಟೊಂದು ಗಂಡಾಂತರ ಬಂದಿಲ್ಲ.

ಚಂಗೇಖಾನ್ ಗಿಝನಿಮುಹಮ್ಮದ, ತೈಮೂರಲಂಗ್, ಔರಂಗಜೇಬ, ಬಾಬರ ಮುಂತಾದ ಭಾರತ ಪಿಪಾಸುಗಳೆಲ್ಲ ದಿಲ್ಲಿಯ ಸಿಂಹಾಸನದಲ್ಲಿದ್ದರೂ ಅಪಘಾನವನ್ನು ಭಾರತದೊಳಗೇ ಎಣಿಸುತ್ತಿದ್ದರು. ಗಿಝನಿ ಮುಹಮ್ಮದಸಂಥವರು ಅನೇಕಾವರ್ತಿ ಧಾಳಿ ಮಾಡಿದ್ದಾರೆ. ಪಠಾಣ ಸುಲ್ತಾನರೂ ಮೊಗಲ ಸಮ್ರಾಟರೂ ಬಹು ಕಾಲ ಭಾರತವನ್ನು ಆಳಿದ್ದಾರೆ. ಆದರೆ ಇವರಿಂದ ಅಪಘಾನರಿಗೆ ಅಷ್ಟೊಂದು ಪ್ರಭಾವಿತ ರಾಜಕೀಯ ಸಂಬಂಧವು ದೀರ್ಘವಾಗಿ ಬೆಳೆದಿಲ್ಲ. ಎನ್ನುವಾಗ ಅವರ ಜೀವನ ಸ್ವಾತಂತ್ರ್ಯ ಎಷ್ಟು ಜಿಗುಟುತನದ್ದೆಂದು ಊಹಿಸಿಯೇ ತಿಳಿಯಬೇಕು. ಭಾರತದಂಥ ವಿಶಾಲ ರಾಷ್ಟ್ರವನ್ನು ಹತ್ತಿಕ್ಕಿ ಸಮ್ರಾಟ್‌ತನ ಮೆರೆಸಿದ ಔರಂಗಜೇಬನಂಥ ಸಾಹಸಿಗಳಿಗೆ-ಅವರ ರಾಕ್ಷಸೀ ತೃಷ್ಣೆಗೆ ಒಂದು ತೀರ ಚಿಕ್ಕ ಪ್ರದೇಶವೆನಿಸಿದ ಅಪಘಾನವು ಸೊಪ್ಪು ಹಾಕದೆ ಬಲಿಯಾಗದೆ ತನ್ನ ಸ್ವಾತಂತ್ರ್ಯ ಕಾಪಾಡಿಕೊಂಡಿದೆಯೆಂದಬಳಿಕ ಇದರಲ್ಲಿ ಸ್ವಾತಂತ್ರ್ಯ ರಕ್ಷಣೆಯ ನಿಸರ್ಗ ಶಕ್ತಿಯು ದ್ಯೋತಕವಾಗುವದಲ್ಲವೆ.

ಒಂದು ಸಮಯ ಔರಂಗಜೇಬನಿಗೆ ಭಾರತವನ್ನೇ ನುಂಗಿ ಹಾಕುವ ಚಪಲತೆಯಲ್ಲಿ ಅಪಘಾನವೊಂದು ಆಪೋಶನವೆಂಬ ದುರಾಶೆಯ ಬಾಯಿ ಚಪ್ಪರಿಸಿಹೋಯಿತು. ಚಿಕ್ಕ ಸೈನ್ಯವೊಂದು ಹುರುಪುಗೊಂಡು ಜಯಪತಾಕೆ ಹಿಡಿದೇ ಸಾಗಿತು. ಇನ್ನೇನು ಸುಲಭದಲ್ಲಿ ಅಪಘಾನವು ಬಾಯೊಳಗಿನ ತುತ್ತು. ಮುಂದೆ ಭಾರತದ ಆಕ್ರಮಣಕ್ಕೆ ಬೇಕಾಗುವ ವೀರ ಅಪಘಾನರ ಸೇನೆಯು ಅಲಭ್ಯಲಾಭವಾಗಿ ದೊರೆಯುವದು. ಇತ್ಯಾದಿ ಕನಸಿನ ಸಾಮ್ರಾಜ್ಯದ ವಿಚಾರಗಳು ಔರಂಗಜೇಬನ ತಲೆಯಲ್ಲಿ ಸುಳಿಯುತ್ತಲೇ ಇತ್ತು. ವಿಜಯದ ಸುದ್ದಿ ಕೇಳಲು ಕಿವಿಯು ಆತುರಗೊಂಡಿತು. ಅಷ್ಟಕ್ಕೆ ಸರಿಯಾಗಿ ಸುದ್ದಿಯೂ ಬಂತು. ವಿಜಯದ ಸುದ್ದಿಯಲ್ಲ ಅಪಜಯದ ಭೀಕರ ವಾರ್ತೆ. ಸೈನ್ಯಕ್ಕೆ ಸೈನ್ಯವೇ ಕಣಿವೆಯಲ್ಲಿ ಹೂತು ಮುಚ್ಚಿಹೋಯಿತೆಂದು. ಅಪಘಾನನ ಒಂದು ಕೂದಲೂ ಕೊಂಕದೆ ಈ ಭಯಂಕರ ಸಾಹಸವು ಔರಂಗಜೇಬನಿಗೆ ತಿವಿತದಂತಾಗಿ ಕೊಂಚ ಎಚ್ಚರಿಸಿತು. ಆದರೆ ದುರಾಶೆಗೆ ಕೊನೆಯಿದೆಯೇ. ಕ್ರೂರವಾದ ಆಜ್ಞೆ

ಯಿಂದ ಪ್ರಸಿದ್ಧ ಸೇನಾಪತಿ ಮಹಮದ ಅಮೀನ್ ಖಾನ್‌ನೊಡನೆ ಪ್ರಚಂಡ ಸೈನ್ಯವೇ ಹೊರಟು ಅಪಘಾನ ಪ್ರದೇಶದ ನೀರಿನ ಆಶ್ರಯ ದಲ್ಲಿ ಠಾಣೆ ಹೊಡೆಯಿತು. ಇನ್ನು ತಡವಿಲ್ಲ ಕೆಲವೇ ಸಮಯದಲ್ಲಿ ಕಾಬೂಲವೋ ಕಂದಹಾರವೋ ಮುತ್ತಿಗೆ ವಿಜಯ ಎನ್ನುವ ಸಂಭ್ರಮ ಬೇರೆ ಬೇರೆ ಮಾರ್ಗಗಳಿಂದ ಅಮೀನ್ ಖಾನನ ದಂಡು ಕಣಿವೆಯಲ್ಲಿ ಸಾಲಿಟ್ಟಿತು. ಗಟ್ಟಿಗತನದಿಂದಲೇ ಇಳಿಯಬೇಕಾದ ಇಕ್ಕಟ್ಟಿನ ಕಣಿವೆ. ಪ್ರಚಂಡ ಸೂರ್ಯನ ಕಿರಣವೂ ಪ್ರವೇಶಿಸದಂತೆ ದಟ್ಟವಾಗಿ ಸುತ್ತಲೂ ಕವಿದ ಕಾನನದ ಕರಾಲ ದೃಶ್ಯ. ಇಕ್ಕೆಲದಲ್ಲಿಯೂ ಏರಲಾರದ ಪರ್ವತ ಶ್ರೇಣಿ. ಜುಳಗುಡುವ ಆಳಕೊಳ್ಳಗಳ ಎದೆ ಬಿರಿವ ನೋಟ. ಇಂಥ ಕಣಿವೆ ಮಾರ್ಗದಲ್ಲಿ ಸೈನ್ಯ ಸುಮಾರು ದೂರ ಸಾಗಿದರೂ ಒಬ್ಬ ಅಪಘಾನನ ಸುಳಿವು ಸಹ ಕಾಣಲಿಲ್ಲ. ಒಂದು ಪ್ರತಿಕ್ರಿಯೆಯ ಸೊಂಕೂ ಹತ್ತಲಿಲ್ಲ. ಆದ್ದರಿಂದ ಅಪಘಾನರು ಹೆದರಿ ಎಲ್ಲಿಯೊ ಓಡಿ ಹೋದರು ಎಂದು ಕೆಲವು ಹುಂಬ ಸೈನಿಕರ ಯೋಚನೆ. ತುಸು ಅಂಜಿಕೆಯ ವರು ಇದೆಂಥ ಭೀಕರ ದಾರಿ. ಒಬ್ಬ ಅಪಘಾನನು ಈಗ ಬಂದರೆ ನಮ್ಮ ನೂರು ಮಂದಿಯನ್ನಾದರೂ ಸುಲಭವಾಗಿ ಕೊಲ್ಲುವಂಥ ಕಣಿ ವೆಯ ಇರುಕಿನಲ್ಲಿದ್ದೇವೆ. ಕೊನೆಗೂ ನಮ್ಮ ಬಾದಶಹನ ಆಶೆಗೆ ನಾವೇ ತುತ್ತಾಗಬೇಕೋ ಏನೋ ಎಂದು ಹೋಗುತ್ತಿದ್ದಂತೆ ಕಣಿವೆ ಮತ್ತೂ ಭಯಾನಕ. ಮುಂದೆ ನೋಡಿದಂತೆ ಮತ್ತೂ ಕಡಿದು, ಸೈನ್ಯವು ಎಚ್ಚರಿಕೆಯಿಂದ ನಿಧಾನವಾಗಿ ತಡವಿ ಸಾಗುತ್ತಿತ್ತು. ಆ ಸನ್ನಿವೇಶದಲ್ಲಿ ಒಂದು ಪ್ರಳಯಾರಂಭವೇ ಆದಂತಾಯಿತು. ಸೇನಾ ಮೇಘಗಳು ಕಾಣದೆ ಮೇಲಿಂದ ಕಲ್ಲಿನ ಮಳೆಗರೆಯಲಾರಂಭಿಸಿತು. ಎಡೆಬಿಡದೆ ಒಂದೇ ರೀತಿಯ ಪಾಷಾಣವೃಷ್ಟಿ. ಕೆಂಪು ರಕ್ತವು ಪ್ರವಾಹಗೊಂಡು ಹರಿ ವಂತಾಯಿತು. ಕಂಟಿಯ ಎಲೆಗಳ ಸಣ್ಣ ತೊನೆದಾಟದ ಹೊರತು ಪರ್ವತ ಪಾರ್ಶ್ವದಲ್ಲಿ ಯಾರೂ ಕಾಣುವಂತಿಲ್ಲ. ಯಾವ ದಿಕ್ಕು ನೋಡಿದರೂ ಒಬ್ಬನ ಸುಳಿವೂ ಹತ್ತದೆ ಈ ರೀತಿಯಾಗುವದು ನೋಡಿ ಪ್ರಕೃತಿಯೇ ಕ್ಷೋಭೆಗೊಂಡು ಕಲ್ಲೆಸೆವಂತಿತ್ತು. ಔರಂಗಜೇಬನ ಸೈನ್ಯವು ಇಂಥ ಅಕಸ್ಮಾತ್ ಯುದ್ಧಕ್ಕೆ ಒಮ್ಮಿಂದೊಮ್ಮೆ ತತ್ತರಿಸಿ

ನುಗ್ಗುನುಗ್ಗಾಗಿ ಹೋಯಿತು. ಆದರೂ ಧೈರ್ಯಗೊಂಡು ನಾವು ಯುದ್ಧಕ್ಕಾಗಿಯೇ ಬಂದವರು. ಸೋತ ಮುಖವನ್ನು ಬಾದಶಹನಿಗೆ ತೋರಿಸುವದಂತೂ ಅಸಾಧ್ಯ. ಎಂದು ಎದೆಗೊಟ್ಟು ತಿರುಗಿ ನಿಂತರು. ಆದರೆ ಏನು ಮಾಡಲೂ ಬರುವಂತಿಲ್ಲ. ತುಬಾಕೆ ಬಿಲ್ಲು ಗುಂಡು ಗಳೆಲ್ಲ ವ್ಯರ್ಥವಾದವು. ಎಷ್ಟೇ ಸಾಹಸ ಮಾಡಿದರೂ ಎಷ್ಟೇ ರೊಚ್ಚಿಗೆದ್ದರೂ ಪ್ರಯೋಜನವಾದದೆಂದರೆ ಅಡವಿಯ ಎಲೆಗಳು ಉದುರಿ ಬಿದ್ದು ತುಸು ಮಟ್ಟಿಗೆ ಬಯಲಾಯಿತು. ಹೊರತು ಅಪಘಾನನೊಬ್ಬನೂ ಉರುಳಲಿಲ್ಲ. ಪ್ರತಿಯಾಗಿ ದೊಡ್ಡ ದೊಡ್ಡ ಬಂಡೆಗಳು ಮೇಲಿನಿಂದ ಉರುಳಿ ಬೀಳಲಾರಂಭಿಸಿದವು. ಸೈನಿಕರ ರಕ್ತ ಪ್ರವಾಹ ಮತ್ತು ಹೆಣದ ರಾಶಿಯಿಂದ ಕಣಿವೆ ಕಟ್ಟಿ ಹೋಯಿತು. ಒಮ್ಮೆ ಅಫಘಾನರ ಸಣ್ಣ ಗುಂಪು ಕಂಡರೆ ಮರುಕ್ಷಣ ಹೆಮ್ಮರಗಳ ಭದ್ರ ಕೋಟೆಯಲ್ಲಿ ಅದೃಶ್ಯ. ಪುನಃ ಕಲ್ಲು ಕೊಂಬೆಗಳ ತೂರಾಟ ಸೈನ್ಯವು ಬಯಲಾದಂತೆ ಈ ಕ್ರಮವು ಹೆಚ್ಚಾಯಿತು. ಇಂಥ ಕೂಟ ಯುದ್ಧದ ಭಯಂಕರ ಹೊಡೆತ ತಾಳಲಾರದೆ. ನೋಡಲಾರದೆ ಅನೇಕರು ಮೊದಲೇ ಕಾಲು ಕಿತ್ತು ಠಾಣೆ ಹೊಕ್ಕಿದ್ದರು. ಅಳಿದುಳಿದವರು ಸೋತು ಸೆರೆ ಸಿಕ್ಕರು. ಈ ಸೆರೆಯಾಳುಗಳನ್ನು ಅಪಘಾನರು ಪೇಟೆಯಲ್ಲಿ ಮಾರಿ ವಿಜಯದ ಲಾಭ ಹಂಚಿಕೊಂಡರು. ಈ ಮಾರಾಟದ ಕ್ರಮವು ಅಂದಿನ ಅಪಘಾನರಲ್ಲಿತ್ತು. ಸೆರೆಸಿಕ್ಕ ವೈರಿ ಸೈನಿಕರಿಗೆ ದಂಡನೆ ಖಂಡನೆಯ ಬದಲು ಕ್ರಯವಿಕ್ರಯ.

ಇತ್ತ ಠಾಣೆಯ ಪ್ರದೇಶವು ನೀರಿಲ್ಲದ ಮರುಭೂಮಿಯಾಗಿ ಆ ಪ್ರದೇಶವೇ ಸುಳ್ಳೆಂದು ಕಾಣುತ್ತಿತ್ತು. ಅಪಘಾನರ ಗೋರಿಲ್ಲಾ ಯುದ್ಧ ರಂಗವು ಮುಗಿಯುವದೆಲ್ಲಿ. ಕೊಳ್ಳಗಳ ನೀರಿನ ಪ್ರವಾಹವನ್ನು ತಡೆಗಟ್ಟಿ ಎತ್ತಲೋ ಸಾಗಿಸಿದ್ದು ನೋಡಿ ಅಮಿನ ಖಾನ್‌ನಂಥ ಧೀರ ಸೇನಾಪತಿಯೂ ಎದೆಗುಂದಿದನು. ಆದರೆ ಯುದ್ಧ ಮುಗಿಯುವದೇ? ಇಲ್ಲ. ಪುನಃ ಅಲ್ಲಿಯೇ ಅಪಘಾನರ ಕಲ್ಲಿನ ಯುದ್ಧಾರಂಭ. ಕೇಳುವದೇನು ಅಳಿದುಳಿದು ಬಂದ ಸೈನಿಕರ ಕೆಚ್ಚು, ನೀರಿಲ್ಲದೆ ಕೂಳಿಲ್ಲದೆ ಈ ಕಲ್ಲಿನ ಬಂಟರ ಮುಂದೆ ಎಷ್ಟು ಕಾಲ ನಿಲ್ಲಬಲ್ಲದು ಠಾಣೆಯ ಪ್ರದೇಶವು

ರುದ್ರಮಯ. ಭೀಷಣ ತಾಂಡವ. ಉಕ್ಕಿ ಹರಿಯುವ ರಕ್ತಮಯ ಪ್ರವಾಹದಲ್ಲಿ ಕೆಲ ಸೈನಿಕರು ಔರಂಗಜೇಬನ ದುರಾಶೆಯ ಪ್ರತೀಕವಾಗಿ ತೇಲಿ ಹೋದರು. ಉಳಿದ ಕೆಲವರು ಅಪಘಾನರ ವಿಜಯೋತ್ಸವದ ಸಂತೆ ಕಂಡರು. ಈ ಭಯಂಕರ ಸುದ್ದಿಯಿಂದ ಔರಂಗಜೇಬನ ಕನಸಿನ ಸಾಮ್ರಾಜ್ಯವೆಲ್ಲ ಬರಿಯ ಬಯಲಾಯಿತು. ಕೊನೆಗೆ ನಿರಾಶೆಯಾಗಿ ಅಪಾರ ಹಾನಿಯೊಂದಿಗೆ ಹಿಮ್ಮರಳಿದ.

ಈ ವಿಚಿತ್ರ ಯುದ್ಧದಲ್ಲಿ ಔರಂಗಜೇಬನ ಹತ್ತು ಸಾವಿರಕ್ಕೂ ಮಿಕ್ಕಿದ ಸೈನಿಕರು ಮಡಿದರು. ಕನಿಷ್ಟ ಎರಡು ಕೋಟಿ ಒಡವೆ ಸಂಪತ್ತು ಅಪಘಾನರ ಸ್ವತ್ತಾಯಿತು ಯುದ್ಧಕಲೆಯರಿಯದ ಸೈನಿಕ ಶಿಕ್ಷಣವಿಲ್ಲದ ಅಪಘಾನವು ಒಂದು ತುತ್ತು ಎಂದು ದುರಾಶೆಯ ಬಾಯ್ದೆರೆದಿದ್ದ ಔರಂಗಜೇಬನನ್ನು ಅಪಘಾನದ ನಿಸರ್ಗ ಶಕ್ತಿಯು ಜೀವ ದಿಂದ ಬಿಟ್ಟದ್ದು ಹೆಚ್ಚಿನ ಮಾತು ಪ್ರಕೃತಿಯ ಅದ್ಭುತ ಮಾಟದಲ್ಲಿ ಎಂಥ ವಿಚಿತ್ರ ಲೀಲೆಯನ್ನುವದು ತಿಳಿಯಲಸಾಧ್ಯ.

ಔರಂಗಜೇಬನ ಈ ಭಯಂಕರ ಸೋಲಿನಿಂದ ಮುಂದೆ ಈ ತನಕ ಅಪಘಾನದ ಮೇಲೆ ಹೆಚ್ಚಾಗಿ ಯಾರೂ ಕೈ ಎತ್ತಲಿಲ್ಲ. "ಅಪಘಾನ" ಈ ಹೆಸರೇ ಒಂದು ಭಯಾನಕ ಸಿಂಹ ಸ್ವಪ್ನವಾಯಿತೋ ಏನೋ. ಇಂದಿನ ಗಡಿನಾಡ ಪ್ರಾಂತವನ್ನೊಳಗೊಂಡಿದ್ದ ಗಾಂಧಾರವು ಮುಸ್ಲೀಮ್ ಬಾದಶಹರ ಆಳಿಕೆಯ ಕಾಲದಿಂದ ಅಪಘಾನ ಎನ್ನುವ ಐತಿಹಾಸಿಕ ಹೆಸರು ಪಡೆಯಿತು.

## ಪ್ರಕೃತ ಕಾಲ

ಅಪಘಾನವೆಂದರೆ ನಾಲ್ಕೂ ದಿಕ್ಕಿನ ಪರ್ವತ ಮೂಲೆಗಳಿಂದ ಮುಚ್ಚಿ ಹೋಗಿದೆ. ಸುಮಾರು ದೂರ ದೂರ ಹಾಯ್ದಿರುವ ಕೊಳ್ಳ ಗಳಿಂದಲೇ ಏನಾದರೂ ಹುಟ್ಟುವಳಿಯ ಪ್ರಯೋಜನ. ಅಲ್ಲಿಯ ಯಾವದೇ ಮಾರ್ಗವೆಂದರೂ ಆಚೆಯಿೀಚೆಯ ಪರ್ವತಗಳಿಂದ ನಿರ್ಮಿತ ವಾದ ಕಣಿವೆ. ಸಮುದ್ರ ಪಾತಳಿಯಿಂದ ಸುಮಾರು ನಾಲ್ಕು ಸಾವಿರ

ಫೂಟು ಎತ್ತರದ ಈ ಭೂಭಾಗವು ಅಷ್ಟೊಂದು ಫಲ ಸಮೃದ್ಧವೆನ್ನು ವಂತಿಲ್ಲ. ಇದರ ಎರಡು ಲಕ್ಷ ಮೂವತ್ತು ಸಾವಿರ ಚವರ ಮೈಲುಳ್ಳ ಭೂಮಿಯಲ್ಲಿ ಹೆಚ್ಚಾಗಿ ಗಿರಿ ಕೊಳ್ಳ ಕಂದರಗಳಿಂದಲೇ ತುಂಬಿದೆ ಯಾದ್ದರಿಂದ ಉತ್ಪಾದಕ ಕ್ಷೇತ್ರವು ಕಡಿಮೆ ಪ್ರಮಾಣದಲ್ಲಿದೆ ದಕ್ಷಿಣೋತ್ತರ ಕಣಿವೆ ಮಾರ್ಗದ ಪಾರ್ಶ್ವದಲ್ಲಿಯು ಗಿರಿ ಶೃಂಗಗಳು ಹತ್ತು ಸಾವಿರ ಫೂಟು ಎತ್ತರದಲ್ಲಿ ನಿಮಿರಿ ನಿಂತು ಆಕಾಶಗೀರುತ್ತಿವೆ. ಪೂರ್ವ ಶೃಂಗವಂತೂ ಪ್ರಪಂಚದ ಎಲ್ಲ ಶಿಖರಗಳನ್ನು ಚಿಕ್ಕದಾಗಿಸುವಷ್ಟು ಗಗನ ಚುಂಬಿತವಾಗಿದೆ. ದಕ್ಷಿಣ ದಿಕ್ಕಿನ ದುರ್ಗಮ ಕಣಿವೆಯು ಪೇಶಾವರದಿಂದ ಹೆಸರಾಂತ ಖೈಬರ ಘಟ್ಟದ ಮಾರ್ಗವಾಗಿ ರಾಜಧಾನಿ ಯಾದ ಕಾಬೂಲವನ್ನು ಮುಟ್ಟುವದು. ರೈಲು ಮೋಟಾರು ಮುಂತಾದ ವಾಹನಗಳ ಮೂಲಕ ಇದೊಂದೇ ಮಾರ್ಗವಾಗಿ ವರ್ಷಂಪ್ರತಿ ಎರಡು ಲಕ್ಷಕ್ಕೂ ಮೀರಿ ಅಫಘಾನರು ಓಡಾಡುತ್ತಾರೆ.

ಅಂಜಿಕೆಯರಿಯದ ಈ ಜನಾಂಗಕ್ಕೆ ಗಂಡಾಂತರವೆಂದರೆ ಹೆಚ್ಚಾಗಿ ಗೊತ್ತಿಲ್ಲ. ಅಷ್ಟು ಎದೆಗಾರಿಕೆ. ದೃಢವಾದ ಉನ್ನತ ಆಳ್ತನ. ನಿಮಿರೆದ್ದು ಕಾಣುವ ಕೂದಲ ರಾಶಿ. ದುಂಡ ಶರೀರ ಉದ್ದನ್ನ ಟೋಪಿ ಪ್ಯಾಜಮ್. ನಿಡಿದಾದ ಶರ್ಟಿನ ಮೇಲೆ ಚಿಕ್ಕ ಪಾಕೇಟ್ ಮುಂತಾದವುಗಳಿಂದ ಎಲ್ಲಿದ್ದರೂ ಇವನೇ ಪಠಾಣನೆಂದು ತಾನಾಗಿ ತಿಳಿಯುವದು. ಅವರ ದೀರ್ಘ ದೇಹಕ್ಕೆ ಜನಸಾಮಾನ್ಯರು ಅಳುಕುವರು. ಆದರೆ ಅವರ ಹೃದಯ ಅಷ್ಟೊಂದು ಕಠೋರವಲ್ಲ. ಅಷ್ಟು ಸುಕುಮಾರ ಕೋಮಲವೂ ಅಲ್ಲ. ವಂಚನೆ ವಿಶ್ವಾಸಘಾತಕತನಗಳು ಸ್ವಭಾವತಃ ಕಡಿಮೆ. ಒಲಿದರೆ ಎಂಥ ಸಹಾಯವನ್ನಾದರೂ ಮಾಡಬಲ್ಲರು. ಈ ಮರ್ಮ ವರಿತ ಪಾಕಿಸ್ತಾನವು ಇವರಿಂದ ಕಾಶ್ಮೀರದ ಲಾಭ ಪಡೆಯಲೆತ್ನಿಸಿತು. ಆದರೆ ಕೊನೆತನಕ ಮರುಳು ಬೀಳುವಷ್ಟು ಬುದ್ಧಿಗೇಡಿಗಳಲ್ಲ. ಅವರಲ್ಲಿಯೂ ಒಂದು ಬಗೆಯ ಜಾಗ್ರತಿಯಾಗಿದೆ. ಪಾಕಿಸ್ತಾನಿಗಳಿಂದ ಮೋಸ ಗೊಳ್ಳುವಷ್ಟು ತಾವು ದಡ್ಡರಲ್ಲವೆಂಬದನ್ನು ಅರಿತಿದ್ದಾರೆ. ಹೀಗಾಗಿ ಇಂದು ಪಾಕಿಸ್ತಾನದ ವಿರುದ್ಧ ಕ್ರಾಂತಿಯ ದೊಡ್ಡ ಅಸ್ತ್ರವನ್ನೇ ಎತ್ತಿ ಹಿಡಿದಿರುವರು. ಅವರು ಎಷ್ಟು ಶೂರರೋ ಅಷ್ಟೇ ಗುಣಸಂಪನ್ನರು. ಎಷ್ಟು

ದಿಟ್ಟರೋ ಅಷ್ಟೇ ಪ್ರಾಮಾಣಿಕರು. ಪೂರ್ಣ ಅಶಿಕ್ಷಿತರೆಂದು ತಿಳಿಯು ವದೂ ವ್ಯರ್ಥ. ಗಡಿನಾಡ ಗಾಂಧಿಯೆಂದು ಹೆಸರು ಗಳಿಸಿದ ಭಾರತಕ್ಕೆ ಚಿರಪರಿಚಿತ ಅಬ್ದುಲ್ ಗಫೂರ್ ಖಾನರು ಶುದ್ಧ ಪಠಾಣರು. ಇಂಥ ಸ್ವಾತಂತ್ರ್ಯಪ್ರಿಯ ಮಾದರಿ ಜನರಿಂದ ನಾವು ಅಫಘಾನಿ ಪಠಾಣರ ಶಿಕ್ಷಣ ಗುಣಗಳನ್ನು ಗುರುತಿಸಬಹುದು. ಆದರೆ ನಮ್ಮಲ್ಲಿ ಪಠಾಣರೆಂದರೆ ಅದೊಂದು ಪುಂಡ ಜಾತಿ. ಹಿಂಸಾಪ್ರಿಯ ಜನಾಂಗ. ರಾಕ್ಷಸೀ ಆಚಾರ ವೃತ್ತಿಯವರು ಎಂತ ಕೆಲವರು ಭಾವಿಸಬಹುದು. ಆದರೆ ವಸ್ತುಸ್ಥಿತಿ ಪೂರ್ಣ ಹಾಗಿಲ್ಲವೆನ್ನಬೇಕಾಗುವದು; ಯಾವದೇ ಜನಾಂಗದಲ್ಲಿ ಯಾದರೂ ಎಲ್ಲ ರೀತಿಯ ಗುಣಸ್ವಭಾವ-ಆಕಾರ ವೃತ್ತಿಯವರು ಇದ್ದೇ ಇರುತ್ತಾರೆ ಎನ್ನುವದು ನಿಸರ್ಗ ನಿಯಮ. ದೂರದೇಶಗಳಲ್ಲಿ ಭಾರತ ವೆಂದರೆ ಕೊರಚರು ಹಾವಾಡಿಗರು ಮುಂತಾದ ಬರೇ ಭಿಕ್ಷುಕರ ದೇಶ ವೆಂತ ಭಾವಿಸಿದವರು ಇನ್ನೂ ಇದ್ದಾರಂತೆ ಎನ್ನುವಾಗ ಅವರು ಭಾವಿಸಿ ದಂತೆ ಭಾರತವಿದೆಯೇ, ಇರಬಲ್ಲದೇ? ಹಾಗಾದರೆ ಭಿಕ್ಷುಕರೇ ಇಲ್ಲೆಂತಿಲ್ಲ. ಎಲ್ಲ ಬಗೆಯವರೂ ಇದ್ದಾರೆ. ಕುಬೇರಪುತ್ರರಂತೆ ಕುಚೇಲಪುತ್ರರೂ ಇದ್ದಾರೆ ಎನ್ನುವ ವಸ್ತುಸ್ಥಿತಿ ಅವರು ತಿಳಿದಿಲ್ಲ. ಇದರಂತೆ ಅಫಘಾನೀ ಪಠಾಣ ಜನಾಂಗದ ವಿಷಯ. ಅವರಲ್ಲಿ ಕಾಶ್ಮೀರದಲ್ಲಿ ಕೊಳ್ಳಿ ಹಾಕಿ ದಂಥ ಕ್ರೂರ ಪುಂಡರೂ ಇದ್ದಾರೆ. ಗಡಿನಾಡ ಗಾಂಧಿಯಂಥ ಸರಳ ಸುಗುಣ ಪ್ರತಿಭಾವಂತ ಮೂರ್ತಿಗಳೂ ಇದ್ದಾರೆ ಹೊರತು ಯಾವ ಜನಾಂಗದಲ್ಲಿಯೂ ಒಂದೇ ಮನೋವೃತ್ತಿಯಿರುವದು ಅಸ್ವಾಭಾವಿಕ. ಆದರೆ ಕೆಲ ಪಠಾಣರಲ್ಲಿ ಇಂದಿಗೂ ಅವರ ಪ್ರಾಚೀನ ಸಂಸ್ಕೃತಿ ದ್ಯೋತಕವಾದ "ಚರಂತೀ" ಜೀವನ ವೃತ್ತಿ ಹೋಗಿಲ್ಲ. ಒಂಟೆ, ಕುದುರೆ ಎತ್ತು, ಕೋಳಿ, ಕತ್ತೆ ಮುಂತಾದ ತಮ್ಮ ವಿಶಿಷ್ಟ ಸರಕುಗಳೊಂದಿಗೆ ಅಲ್ಲಲ್ಲಿ ಸಂಚರಿಸುತ್ತ-ಹುಲ್ಲುಗಾವಲು ಹುಡುಕುತ್ತ ಅಂಡಲೆವ ಅಸಂಖ್ಯ ಕುಟುಂಬಗಳು ಅಫಘಾನದಲ್ಲಿ ಇನ್ನೂ ಇವೆ. ಅವರಿಗೆ ನಿಶ್ಚಿತವಾದ ಹೊಲ ಮನೆಯಿಲ್ಲ. ಅವರ ಜೀವನ ಕ್ರಮವೇ ಹಾಗೆ. ಅದಕ್ಕೆ "ಯಾಯಾವರ ವೃತ್ತಿ"ಯೆನ್ನುತ್ತಾರೆ. ಕುರಿ, ದನಗಳ ಹಿಂಡು ಮೇಯಿ ಸುತ್ತ ನೀರು ಹುಲ್ಲಿನ ಪ್ರದೇಶ ಹುಡುಕುತ್ತ ಖೈಬರ ಮುಂತಾದ

ಕಣಿವೆಗಳಲ್ಲಿ ಸ್ವಚ್ಛಂದದಿಂದ ಓಡಾಡುವ ಇಂಥ ಪಠಾಣ ಗುಂಪಿನ ನಡೆಗೆಯ ಧ್ವನಿ ಉನ್ಮಾದರವ ಮುಂತಾದವುಗಳಿಂದ ಈ ಗುಂಪಿನ ಗರುತು ದೂರದಿಂದಲೇ ಹತ್ತುವದು. ಇಂಥ ಹಲವು ಗುಂಪುಗಳು ಕೂಡುವ ಕೇಂದ್ರವೆಂದರೆ "ದಾಡಿಮೀ" ಸರೋವರದ ಹಸಿರು ತುಂಬಿದ ತೀರ ಪ್ರದೇಶ. ಜೀವನದ ಇತರ ಚಿಂತೆ ಇವರಿಗೆ ಇಲ್ಲವಾದ್ದರಿಂದ ಈ ಗುಂಪಿನಲ್ಲಿ ಕಲಹ ಪ್ರಿಯತೆ ಚೆನ್ನಾಗಿದೆ. ಅವರ ಜೀವಧಾರವಾದ ವಿಶಿಷ್ಟ ಸಂಪತ್ತು ಅವರ ಸರಂಜಾಮುದೊಂದಿಗೆ ಇರುವದು. ಇಂಥ ವೃತ್ತಿಯ ಪಠಾಣರು ಸಾಮಾನ್ಯ ಅರವತ್ತು ಸಾವಿರವಿದ್ದಾರೆ. ಅವರ ಜೀವನ ಪರಂಪರೆಯ ಕ್ರಮುವದು.

ಸಾಮಾನ್ಯ ಒಂದು ಕೋಟಿ ಆರುವತ್ತು ಲಕ್ಷ ಅಪಘಾನೀ ಪ್ರಜೆಗಳು ಇಂದು ಕೃಷಿ, ಕೈಗಾರಿಕೆ, ಕೂಲಿ, ವ್ಯಾಪಾರ ಮುಂತಾದ ವಿವಿಧೋದ್ಯಮಗಳಲ್ಲಿ ಪ್ರಗತಿ ಹೊಂದುತ್ತಿದ್ದಾರೆ. ಅಪಘಾನ್ ರಾಜ ವಂಶದ ಜಹೀರ್ ಬಾದಶಹನು ಇಂದಿನ ಅಪಘಾನೀ ಪ್ರಜೆಗಳ ಪ್ರೀತಿಯ ರಾಜನಾಗಿದ್ದಾನೆ. ಇವನ ಅಣ್ಣನಾದ ಅಮಾನುಲ್ಲಾ ಖಾನನು ಅತಿ ಕ್ರೂರನೆಂದು ಬ್ರಿಟಿಷರ ಸಹಾಯದ ಮೂಲಕ ಪದಚ್ಯುತಗೊಳಿಸಿದರು. ಅವನು ಕುನಿಸು ತಿನ್ನುತ್ತ ದೇಶಾಂತರ ಹೋದನು. ಇದಾಗಿ ಹಲ ವರ್ಷಗಳಾದವು. ಇಂದಿನ ಜಹೀರ ಬಾದಶಹನು ಉದಾತ್ತ ರಾಜಕಾರಣಿಯೆಂದು ಪ್ರಜೆಗಳು ನಂಬಿದ್ದಾರೆ. ೧೯೩೩ರಿಂದ ಇವನ ಆಳಿಕೆಯಲ್ಲಿ ಅಪಘಾನವು ಒಳ್ಳೆ ಪ್ರಗತಿಗೊಳ್ಳುತ್ತ ಬಂದದೆ. ಆಡಳಿತೆಯ ಕ್ರಮದಲ್ಲಿ ಪತ್ರಿಕಾ—ಶಿಕ್ಷಣ-ವ್ಯಾಪಾರ—ಕೈಗಾರಿಕೆ—ಕೃಷಿ—ವಿದೇಶ ಸಂಪರ್ಕ—ಶಾಂತತೆ—ಮಂತ್ರಿಮಂಡಲ ರಚನೆ ಮುಂತಾದುವುಗಳೆಲ್ಲ ಸುಧಾರಿಸುತ್ತ ಬಂದಿವೆ. ಕಾರಣವಾಗಿ ಆದರ ಆರ್ಥಿಕ ಮಟ್ಟವೂ ಏರುತ್ತಲಿದೆ. ಪ್ರಾರಂಭದಲ್ಲಿ ಅಪಘಾನದ ರಾಷ್ಟ್ರೀಯ ಬ್ಯಾಂಕು ಒಂದು ಕೋಟಿ ಬಂಡವಲಿನದಾಗಿತ್ತು. ಈಗ ಐವತ್ತೈದು ಕೋಟಿ ಅರವತ್ತು ಲಕ್ಷಕ್ಕೂ ಮಿಕ್ಕಿ ಬೆಳೆದಿದೆ. ಇದರಲ್ಲಿ ಜನತೆಯ ಹಣದಂಶವು ಈಗ ನೂರರಲ್ಲಿ ಹತ್ತರಷ್ಟು ಮಾತ್ರವುಳಿದಿದೆ. ೧೯೩೫ರಿಂದ ಮಾತ್ರ ಇಲ್ಲಿ ಕರೆನ್ಸಿ ನೋಟಿನ ಪ್ರತ್ಯಕ್ಷ ಚಲಾವಣೆಯ ಯುಗಾದಿಯು ಆರಂಭವಾ

ಯಿತು. ಹಣಕಾಸಿನಲ್ಲೀಗ ಅಜಗಜಾಂತರ ವ್ಯತ್ಯಾಸಹೊಂದಿದಂತಾಯಿತು. ಮೊಟ್ಟಮೊದಲು ಎರಡು ಕೋಟಿ ಬೆಲೆಯ ಬೆಳ್ಳಿ ಬಂಗಾರವಿದ್ದರೆ, ಈಗ ಎಪ್ಪತ್ತೇಳು ಕೋಟಿ ಇಪ್ಪತ್ತು ಲಕ್ಷದಷ್ಟು ಬೆಳೆದಿದೆ. ಈ ವ್ಯತ್ಯಾಸಗಳಿಂದ ಅಫಘಾನ ಜೀವನವೂ ಪ್ರಗತಿಯತ್ತ ಹರಿಯುತ್ತಿದೆಯೆನ್ನಲಡ್ಡಿಯಿಲ್ಲ.

## ಯಾಂತ್ರಿಕತೆ

ಇನ್ನು ಆಧುನಿಕ ಯಾಂತ್ರಿಕ ಸಲಕರಣೆ ಮುಂತಾದ ಉತ್ಪಾದಕಗಳಲ್ಲಿ ತನ್ನ ಮಟ್ಟಿಗೆ ಮುಂದಡಿಯಿಟ್ಟದೆ. ಬಟ್ಟೆಯ ತಯಾರಿಯೂ ಅಷ್ಟೊಂದು ಕನಿಷ್ಟವಾಗಿಲ್ಲ. ವರ್ಷದಲ್ಲಿ ಹದಿಮೂರು ಕೋಟಿ ಗಜ ವಸ್ತ್ರಗಳನ್ನು ತಯಾರಿಸುತ್ತಿದೆ. ಸಕ್ಕರೆಯ ಮೂರು ಕಾರ್ಖಾನೆಗಳಿಂದ ವರ್ಷದಲ್ಲಿ ಸುಮಾರು ಇಪ್ಪತ್ತೆರಡು ಸಾವಿರ ಟನ್ ಸಕ್ಕರೆ ಉತ್ಪಾದಿಸುವದು. ಸಿಮೆಂಟಿನ ಎರಡು ಫ್ಯಾಕ್ಟರಿಯಿಂದ ಒಂದು ಲಕ್ಷ ಇಪ್ಪತ್ತು ಸಾವಿರ ಟನ್ ಸಿಮೆಂಟು ಪ್ರತಿ ವರ್ಷದಲ್ಲಿ ತಯಾರಾಗುವದು ಇತರ ಖನಿಜ ಸಂಪತ್ತುಗಳೂ ಅಷ್ಟೊಂದು ಕೊರತೆಯಲ್ಲಿಲ್ಲವಾದ್ದರಿಂದ ಇನ್ನೂ ಅತ್ಯಾವಶ್ಯಕ ಯಾಂತ್ರಿಕ ಕ್ಷೇತ್ರಗಳ ಕುರಿತು ಅಫಘಾನ ಸರ್ಕಾರವು ಸಂಶೋಧನೆ ಕ್ರಮ ನಡೆಸುತ್ತಲಿದೆ.

## ಆಯುಕಟ್ಟಿನ ಪ್ರದೇಶ

ಭಾರತದ ಸುತ್ತಲಿನ ಆಯುಕಟ್ಟಿನ ಪ್ರದೇಶಗಳಲ್ಲಿ ಅಫಘಾನವು ಅತ್ಯಂತ ಮಹತ್ವದ್ದಾಗಿದೆ. ಅನಾದಿ ರಾಜರ ಕಾಲದಿಂದಲೂ ಖೈಬರ ಮಾರ್ಗವು ದಂಡಿನ ಪ್ರದೇಶವಾಗಿತ್ತು. ಪರಾಕ್ರಮಣ ತಡೆಯಲು ನಿರಂತರವೂ ಬಲವಾದ ಕಾವಲು ಇಲ್ಲಿರಬೇಕಾಗುವದು. ಬ್ರಿಟಿಶರು ಸಹ ಭಾರತದ ಭದ್ರತೆಗಾಗಿ ಈ ಕಣಿವೆಯಲ್ಲಿ ಕೋಟ್ಯಂತರ ಹಣ ಚೆಲ್ಲುತ್ತಿದ್ದರು. ಇಂದಿನ ಪಾಕಿಸ್ತಾನವಂತೂ ಈ ಪ್ರದೇಶದಲ್ಲಿ ಹೊಸ ಇತಿಹಾಸವನ್ನೇ ರೂಪಿಸುತ್ತಿದೆ. ಅನಾದಿ ಬುದ್ಧ ಸೈನಿಕರ ಬುದ್ಧಿ ಶೈಥಿಲ್ಯದಿಂದ ಕಣಿವೆಯ ಭದ್ರತೆ ಒಮ್ಮೆ ಸಿಡಿಲಗೊಂಡದ್ದೇ ಸರಿ. ಗ್ರೀಸ್

ಮೊಗಲ್, ಪಠಾಣ, ಹೂಣ, ಅರಬ ಮುಂತಾದ ಆಕ್ರಮಣಕಾರರ ನಿರಂತರದಾಳಿಗೆ ಕಾರಣವಾಯಿತು.

ಈ ಖೈಬರ ಕಣಿವೆಯ ಮಹತ್ವ ಇಂದಾದರೂ ಕಡಿಮೆಯಾಗಿಲ್ಲ. ಹಿಂದಂತೂ ಇತಿಹಾಸಪ್ರಸಿದ್ಧ ಮುಂದೆಯೂ ಕಡಿಮೆಯಾಗುವಂತಿಲ್ಲ. ಈಗ ರಶಿಯಾದ ದೃಷ್ಟಿಯಿಂದ ಈ ಪ್ರದೇಶವು ಅತ್ಯಂತ ಮಹತ್ವದ್ದಾಗಿದೆ. ಅಫಘಾನವೊಮ್ಮೆ ರಶಿಯಾದ ವರ್ಚಸ್ಸಿನಲ್ಲಿ ಬಿದ್ದರೆ ಭಾರತ ಪ್ರವೇಶಿಸಲು ರಶಿಯಾಕ್ಕೆ ಹೆಚ್ಚಿನ ಆಲೋಚನೆ ತೊಂದರೆಗಳಿಲ್ಲ. ಈ ದೃಷ್ಟಿಯಿಂದ ಬ್ರಿಟಿಶರು ಅಫಘಾನವನ್ನು ತಮ್ಮ ವರ್ಚಸ್ಸಿನಲ್ಲಿರಿಸಿಕೊಳ್ಳಲು ಸುಮಾರು ವರ್ಷಗಳಿಂದ ಯತ್ನ ನಡೆಸಿದ್ದಾರೆ. ಐವತ್ತೈದು ವರ್ಷಗಳ ಪರ್ಯಂತರ ಹೋರಾಟವನ್ನು ನಡೆಸಿ ಖೈಬರ ಕಣಿವೆಯ ಮುಖ ಪ್ರದೇಶವನ್ನು ಸ್ವಾಧೀನಪಡಿಸಿಕೊಂಡು ಭಾರತದ ಭದ್ರತೆ ಬೆಳೆಸಿದರು. ಮತ್ತು 'ಡುರಾಂಡ್' ಗಡಿ ರೇಷೆಯನ್ನು ನಿರ್ಮಿಸಿ ಪರಾಕ್ರಮಣ ನಿಯಂತ್ರಿಸಿದರು. ಇದರಿಂದ ಅಫಘಾನದ ಒಂದು ಸಣ್ಣ ಭಾಗವು ಈ ದಿಕ್ಕಿನಲ್ಲಿ ಕಳಚಿದಂತಾದರೆ ಅತ್ತ ಅಫಘಾನದ ಉತ್ತರ ಗಡಿಯಲ್ಲಿ ರಶಿಯಾವು ಗಲಭೆಯೆಬ್ಬಿಸಿ 'ಬುಸ್ಕಾ' ಮಂಡಲವನ್ನು ಅಫಘಾನದಿಂದ ಕಿತ್ತುಕೊಂಡಿತು. ಅಫಘಾನವೀ ಸಮಯದಲ್ಲಿ ಗೊಂದಲಕ್ಕೆ ಬೀಳದೆ ಬುದ್ಧಿವಂತಿಕೆಯಿಂದ ತಾಳ್ಮೆ ವಹಿಸಿತು. ಈ ಬುಸ್ಕಾ ಪ್ರದೇಶವು ಮಧ್ಯ ಪೂರ್ವದಿಂದ ಭಾರತ ಪ್ರವೇಶಕ್ಕೆ ಅತ್ಯಂತ ಆಯಕಟ್ಟಿನ ಪ್ರಾಂತ. ಮಹತ್ವಪ್ರಯೋಜನವುಳ್ಳದ್ದು. ಅಫಘಾನವು ರಶಿಯಾದೊಡನೆ ವೈರ ಕಟ್ಟದೆ ಅದರ ಸ್ನೇಹಕ್ಕೆ ಒಲಿದಂತಿದೆ. ಇದನ್ನು ಬ್ರಿಟಿಶರು ಕಣ್ಣಿಟ್ಟು ಕಾಣುತ್ತಿದ್ದಾರೆ. ಸದ್ಯಕ್ಕೆ ಭಾರತದೊಡನೆಯೂ ಸ್ನೇಹ ಸೌಹಾರ್ದ ಬೆಳೆಸುತ್ತಿದೆ. ಅಫಘಾನವು ಇಂದು ವೈರ ಧೋರಣೆ ತಾಳಿದ್ದೆಂದರೆ ಪಾಕಿಸ್ತಾನದವುಟ್ಟಿಗೆ ಮಾತ್ರ.

### ಸೀಮಾ ಪ್ರಾಂತ-ರಾಜಕಾರಣ

ಭಾರತ-ಅಫಘಾನಗಳ ಮಧ್ಯ ಗಡಿಯಾದ ಸೀಮಾ ಪ್ರಾಂತವು ಇತಿಹಾಸ ಕಾಲದಲ್ಲಿ ಅಫಘಾನದೊಂದಿಗೆ ರಾಜಕೀಯವಾಗಿ ಕೂಡಿ

ಕೊಂಡಿತ್ತು. ಸುಮಾರು ಹದಿನೇಳನೆಯ ಶತಕದಲ್ಲಿ ಪಂಜಾಬದ ಸೀಖ ರಾಜರು ಈ ಭಾಗವನ್ನು ಗೆದ್ದರು. ಅಂದಿನಿಂದ ಆಡಳಿತೆ ಭಿನ್ನವಾಯಿತು. ೧೮೦೧ರಲ್ಲಿ ಬ್ರಿಟಿಷರು ಈ ಗಡಿನಾಡ ಭಾಗವನ್ನು ಪಂಜಾಬದ ಮುಸ್ಲೀಮರಿಗೆಂದು ಪ್ರತ್ಯೇಕ ಪ್ರಾಂತವಾಗಿಯೇ ಕಲ್ಪಿಸಿದರು. ೧೯೩೫ರ ಲಾಗಾಯ್ತು ಇದು ಬ್ರಿಟಿಷ ಗವರ್ನರರ ಆಳಿಕೆಗೊಳಪಟ್ಟ ಪ್ರಾಂತ್ಯವೆನಿಸಿತು. ಈ ಪ್ರಾಂತದಲ್ಲಿಯೇ ಬ್ರಿಟಿಷರ ಗಡಿರೇಖೆಯ ನಿರ್ಮಾಣವು ಸ್ವಾತಂತ್ರ್ಯಪ್ರಿಯರಾದ ಅಫಘಾನ ಪಠಾಣರನ್ನು ನಿಯಂತ್ರಿಸುವ ಧೂರ್ತ ವಿಚಾರದಿಂದಲೇ ಆಗಿದೆ. ಈ ಭಾಗದಲ್ಲಿ ಸಂರಕ್ಷಣಾ ವೆಚ್ಚವೆಂದು ವರ್ಷಂಪ್ರತಿ ಹನ್ನೆರಡು ಕೋಟಿ ರೂಪಾಯಿಗಳನ್ನು ಬ್ರಿಟಿಷರು ಖರ್ಚು ಮಾಡಿದ್ದಾರೆ. ಈಗ ಅಫಘಾನ-ಪಾಕಿಸ್ತಾನಗಳ ಕಲಹ ಬೀಜವೂ ಈ 'ಡುರಾಂಡ್' ಭಾಗವೇ ಆಗಿದೆ. ಕಾರಣವೆಂದರೆ ಅದೇ ಗಡಿನಾಡ ಪ್ರಾಂತವನ್ನು ಸದ್ಯ ಪಾಕಿಸ್ತಾನವು ಆಳುತ್ತಿದೆ. ಆ ಪ್ರಾಂತವು ನ್ಯಾಯವಾಗಿ ಅಫಘಾನಕ್ಕೆ ಸೇರಬೇಕಾದ ಪ್ರದೇಶವೆಂದು ಅಫಘಾನದ ಪಠಾಣರ ವಾದ. ಅಫಘಾನದ ಇಂದಿನ ರಾಜಕಾರಣಕ್ಕೆ ಈ ಸೀಮಾ ಪ್ರಾಂತವು ನಾಂದಿಯೆಂದು ಹೇಳಬಹುದು. ನಾಲ್ಕೂ ದಿಕ್ಕಿನಿಂದ ತನ್ನ ದೇಶ ಸಂಸ್ಕೃತಿಗಳ ರಕ್ಷಣೆಗಾಗಿ ಅಫಘಾನವು ಜಾಗ್ರತೆ ವಹಿಸುತ್ತಿದೆ. ವಿದೇಶಗಳಲ್ಲಿಯೂ ಪ್ರಭಾವ ಬೆಳೆಸಲು ಬಯಸುತ್ತಿದೆ. ತನಗೊಂದು ಬಲವಾದ ಬಂದರ ಬೇಕೆಂದು ಅದರ ಕನಸು. ಕರಾಚಿಯನ್ನು ಬಂದರಕ್ಕಾಗಿ ಕೇಳಿದಾಗ ಒಮ್ಮೆ ಬ್ರಿಟಿಷರು ಒಪ್ಪಲಿಲ್ಲ. ಈಗಲೂ ಆ ಹಂಬಲ ಮರೆತಿಲ್ಲವೆಂತ ಕಾಣುತ್ತದೆ. ಗಡಿನಾಡ ಭಾಗ ತನಗೆ ಸೇರಿದರೆ ಎಂದಾದರೂ ಬಂದರ ಸಾಧಿಸಬಹುದೆಂದು ಅದರ ಮನೀಷೆಯಿರಬೇಕು. ಆದ್ದರಿಂದ ಗಡಿನಾಡು ಸಾಂಸ್ಕೃತಿಕ ಭೌಗೋಲಿಕ ಮುಂತಾದೆಲ್ಲ ರೀತಿಯಿಂದ ತನ್ನದೇ ಎಂದು ಅಫಘಾನ ವಾದಿಸುತ್ತಿದೆ. ಮತ್ತು ಉತ್ತರ ಗಡಿಯಲ್ಲಿ ತನ್ನ ಬುಸ್ಸಾ ಪ್ರಾಂತವನ್ನು ರಶಿಯಾದ ಮೂಲಕ ಕಳೆದುಕೊಂಡು ಈಗ ಆ ಹಾನಿಯನ್ನು ಸೀಮಾ ಪ್ರಾಂತದಿಂದ ತುಂಬಿಕೊಳ್ಳದೆ ಅಫಘಾನಕ್ಕೆ ತೃಪ್ತಿಯೇ ಇಲ್ಲದಂತಾಗಿದೆ. ಸದ್ಯಕ್ಕೆ ಗಡಿನಾಡು ಸೀಮೆ ಒಂದು ಸಮಸ್ಯೆಯೇ ಆಗಿದೆ. ಈ ಕುರಿತು ಅಫಘಾನದ ಬಹಿರಂಗ ಘೋಷಣೆಯಂತಿದೆ.

ಅನಾದಿ ಸಂಬಂಧವುಳ್ಳ ನಮ್ಮದಾದ ಈ ಗಡಿನಾಡಿನಲ್ಲಿ ಪಾಕಿಸ್ಥಾನಿಗಳು ಅನ್ಯಾಯವಾಗಿ ಅಧಿಕಾರ ನಡೆಸುತ್ತಿದ್ದಾರೆ. ಈ ಗಡಿಯು ಡುರಾಂಡ್ ರೇಷೆಯು ಕೃತಕವಾದದ್ದು. ಬ್ರಿಟಿಷರಿಂದ ಹುಟ್ಟಿದ ಈ ರೇಷೆಯು, ಅವರ ಸಂಗಡಲೇ ಹೋಗಿ ಬಿಟ್ಟಿದೆ. ಈಗ ಚೈತನ್ಯ ಹೀನವಾಗಿದೆ. ನಮ್ಮ ನಿಸರ್ಗ ಸಂಬಂಧವನ್ನು ಈ ಕೃತಕ ರೇಷೆಯು ಎಂದಿಗೂ ತಡೆಯುವಂತಿಲ್ಲ. ತಡೆಯುವದು ಅಸಾಧ್ಯ, ಅನ್ಯಾಯ ಜಿನ್ನಾರ ಆಶ್ವಾಸನೆಯನ್ನು ಸ್ವಾರ್ಥದಲ್ಲಿ ಮರೆತ ಪಾಕಿಸ್ತಾನಿಗಳು ಅನ್ಯಾಯದ ಆಕ್ರಮಣವನ್ನೂ ನಡೆಸುತ್ತಿದ್ದಾರೆ. ಜಿನ್ನಾರವರು ಮತಗಣನೆಯಂತೆ ನಿಶ್ಚಯವಾಗಲಿ ಎಂದಿದ್ದರು. ಆದೂ ಸುಸಂಬದ್ದ ರೀತಿಯಲ್ಲಿ ಆಗಲಿಲ್ಲವೆಂದು ಈ ದೂರನ್ನು ಸಂಯುಕ್ತ ರಾಷ್ಟ್ರ ಸಂಘಕ್ಕೆ ವರದಿ ಮಾಡಲು ಅಫಘಾನ ಯತ್ನಿಸುತ್ತಿದೆ. ತನ್ಮಧ್ಯೆ ಗಡಿನಾಡಿನ ಪಠಾಣ ಜನಾಂಗವೂ ಭಯಂಕರವಾದ ಚಳವಳಿ ಹೂಡಿದೆ. ಗಡಿನಾಡ ಗಾಂಧಿಯಂಥ ಅನೇಕ ಮುಖಂಡರು ಪಾಕಿಸ್ತಾನೀ ಜೈಲು ಕಾಣುತ್ತಿದ್ದಾರೆ. ಸ್ವಾತಂತ್ರ್ಯದ ದೊಡ್ಡ ಆಂದೋಲನವನ್ನೇ ಎಬ್ಬಿಸಿದ ಈ ಜನಾಂಗವು ಹೇಳುವದೇನಂದರೆ ನಾವು ಹುಟ್ಟಾ ಸ್ವತಂತ್ರರು. ನಮ್ಮ ಮೇಲೆ ಯಾರ ಅಧಿಕಾರವೂ ಘೋರ ಅನ್ಯಾಯ ಅಸಹ್ಯ. ಸ್ವತಂತ್ರತೆಗಾಗಿ ಪ್ರಾಣ ಹೋದರೂ ಚಿಂತೆಯಿಲ್ಲ. ಅಂತೂ ಪಾಕಿಸ್ತಾನದ ಅಧಿಕಾರ ದರ್ಪಬೇಡ. ಸ್ವತಂತ್ರ ಪಠಾಣಿಸ್ತಾನವೇ ನಮ್ಮ ಗುರಿ. ಎಂದು ಹೋರಾಡುತ್ತಿದ್ದಾರೆ.

ಆದರೆ ಪಾಕಿಸ್ತಾನವೂ ಅಫಘಾನರಿಗೆ ಅಸಂಬದ್ಧ ಉತ್ತರಕೊಡುತ್ತಿರುವಲ್ಲಿ ಹೇಗೂ ಹಿಂಜರಿಯಲಿಲ್ಲ. ಜಿನ್ನಾರ ಆಶ್ವಾಸನೆ ಕಲ್ಪಿತ ಸುಳ್ಳು. ಮತಗಣನೆ ಅನವಶ್ಯ. ನಿಮ್ಮ ಜಹೀರ ಬಾದಶಹನು ಅತ್ಯಂತ ಕ್ರೂರ ಅವಿಚಾರಿಯಾದ್ದರಿಂದ ಅವನನ್ನು ಸಿಂಹಾಸನದಿಂದ ತಳ್ಳಿಹಾಕಿರಿ. ಅವನ ಅಣ್ಣನಾದ ಅಮಾನುಲ್ಲಾನು ನ್ಯಾಯವಾಗಿ ಬಾದಶಹನಾಗಲಿ. ಎಲ್ಲ ರೀತಿಯಿಂದ ಅಫಘಾನ ಸಿಂಹಾಸನಕ್ಕೆ ಯೋಗ್ಯ ಹಕ್ಕುದಾರನಾದ ಅಮಾನುಲ್ಲಾ ಖಾನನು ಇಟಲಿಯಿಂದ ಮರಳಿ ಈಗ ನಮ್ಮಾಶ್ರಯದಲ್ಲಿದ್ದಾನೆ ಅವನೇ ನಿಮ್ಮನ್ನು ಚೆನ್ನಾಗಿ

ಆಳುವಂತೆ ನಮ್ಮ ನ್ಯಾಯುವಾದ ಯತ್ನ; ಎಂದು ಮುಂತಾಗಿ ಅಪ್ರಸ್ತುತ ವಿಷಯುಗಳನ್ನು ಅಸ್ತವ್ಯಸ್ತ ಹೇಳುತ್ತಿದೆ ಅಲ್ಲದೆ ಪಠಾಣರ ಸತ್ಯಾಗ್ರಹ ಮುರಿಯುುವದಕ್ಕಾಗಿ ಯಾವ ಹಿಂಸೆ ಕೊಡಲೂ ಹಿಂಜರಿಯುುವದಿಲ್ಲ. ಬಾಂಬುಗಳ ಪ್ರಯೋಗವು ಸಹ ಆಗಿ ಹೋಯಿತು. ಈ ಕೃತ್ಯಗಳನ್ನೆಲ್ಲ ಅಪಘಾನದ ಎಸೆಂಬ್ಲಿಯಲ್ಲಿ ಜಹೀರಬಾದಶಹನು ಖಂಡಿಸುತ್ತ ಎಚ್ಚರಿಕೆ ಕೊಡುತ್ತ ಬಂದಿದ್ದಾನೆ. ಕಾಬೂಲ ರೇಡಿಯೋಗಳು ಈ ಕುರಿತು ಪ್ರಚಾರ ಕ್ರಮ ಕೈಕೊಂಡಿವೆ. ದಿನ ಕಳೆದಂತೆ ಪಠಾಣ ಚಳವಳಿಯು ಅತ್ಯುಗ್ರವಾಗುತ್ತಿದೆ. ಪಾಕಿಸ್ತಾನದ ರಾಜಧಾನಿ ಕರಾಚಿಯವರೆಗೂ ಇದರ ಒಳ ತಾಕುತ್ತಲಿದೆ. ಪಠಾಣಿಸ್ತಾನ ಸರಕಾರವೆಂದು ರೂಪುಗೊಳ್ಳುತ್ತಿರುವ ಗಡಿನಾಡಿನ ಪಠಾಣ ಜನತೆಗೆ ಅಪಘಾನದ ಬೆಂಬಲವಿದ್ದೇ ಇದೆಯುನ್ನುವದು ನಿಶ್ಚಿತ. ಅಪಘಾನಿಸ್ತಾನ ಪಠಾಣಿಸ್ತಾನಗಳ ಈ ಏಕರೂಪ ಸಂಬಂಧ ಕಡಿದುಹಾಕಲು ಪಾಕಿಸ್ತಾನವು ಇಲ್ಲದ ಒಡಕು ತಂತ್ರ ಹೂಡುತ್ತಲೇ ಸಾಗಿದೆ. ಸರಹದ್ದ ಪ್ರಾಂತವು ಪಠಾಣಿಸ್ತಾನವಾಗುವದು. ಇತಿಹಾಸದ ವಿರುದ್ಧವೆಂದು ವಿದೇಶದಲ್ಲೂ ಘೋಷಿಸುತ್ತಿದ್ದ ಪಾಕಿಸ್ತಾನವು ಈ ಕುರಿತು ಒಂದು ಭೇದ ತಂತ್ರವನ್ನೂ ನಡೆಸಿತೆಂದು ಅಪಘಾನದ ಆರೋಪ. ಪಠಾಣಿಸ್ತಾನದಿಂದ ದೊಡ್ಡ ಪ್ರಮಾಣದಲ್ಲಿ ಅಪಘಾನಕ್ಕೆ ನೀರಿನ ಪುರವಟಿ ಮಾಡುವ ನಳಿಕೆಗಳನ್ನು ಪಾಕಿಸ್ತಾನವೇ ಮುರಿದು ನಮ್ಮೊಳಗಿನ ಮೈತ್ರಿಯನ್ನು ಭೇದಿಸಲು ಯತ್ನಿಸಿದೆ. ಇಂಥ ದುರ್ನೀತಿಗಳಿಂದ ಪಾಕಿಸ್ತಾನವು ಮುಂದರಿಯುುವಾಗ ಎಚ್ಚರಿಕೆ, ಎನ್ನುತ್ತಿದೆ ಅಪಘಾನ. ಈ ತುಮುಲಾಟದಲ್ಲಿ ಕರಾಚಿಯಲ್ಲಿರುವ ಅಪಘಾನದ ರಾಯಭಾರಿಯು ಹಿಮ್ಮರಳಿದ್ದಾನೆ. ಪೇಶಾವರದಲ್ಲಿ ಅಪಘಾನ ರಾಯಭಾರಿಯ ಮನೆಯೆದುರು ಪಾಕಿಸ್ತಾನಿಗಳ ವಿರೋಧ ಪ್ರದರ್ಶನವಾಗುತ್ತಿದೆ. ಕಾಬೂಲದಲ್ಲಿಯು ಪಾಕಿಸ್ತಾನ ರಾಯಭಾರಿಯು ಭವನದ ಮುಂದೆ ಅಪಘಾನರು ಮತ ಪ್ರದರ್ಶನ ಮಾಡುತ್ತಿದ್ದಾರೆ. ಒಮ್ಮೊಮ್ಮೆ ಪಠಾಣ ಪಾಕಿಸ್ತಾನಿಗಳೊಳಗೆ ಚಕಮಕಿ ನಡೆಯುತ್ತಲೂ ಇದೆ. ಗಡಿ ಪ್ರದೇಶದಲ್ಲಿ ಪಾಕಿಸ್ತಾನವೊಂದು ಬಡಿಗೆ ಸೈನ್ಯ ಸಂಗ್ರಹ ನಡೆಸಿದೆ. ಇಷ್ಟೊಂದು

ಗೊಂದಲದ ಕಾರಣಗಳು ಇನ್ನಾವ ರೀತಿಯಿಂದ ಸ್ಫೋಟಗೊಂಡು ಎಂಥ ಭಯಾನಕ ರೂಪ ತಾಳುವದೋ ಯಾರಿಗೆ ಗೊತ್ತು. ಆದರೆ ಸ್ವಾತಂತ್ರ್ಯ ಪ್ರಿಯ ಪಠಾಣರು ತಮ್ಮ ಹಟವನ್ನು ಸಾಧಿಸದೆ ಎಂದಿಗೂ ಬಿಡತಕ್ಕವರಲ್ಲವೆನ್ನುವದು ಮಾತ್ರ ಖಂಡಿತ.

## ಶಿಕ್ಷಣ ಪ್ರಣಾಲಿ

ಇನ್ನು ಅಫಘಾನದ ರಾಜಕೀಯ ರಂಗದಿಂದ ಶಿಕ್ಷಣ ಕ್ಷೇತ್ರದೆಡೆಗೆ ನೋಡೋಣ. ಈ ವರೆಗಿನ ಅಲ್ಲಿಯ ಶಿಕ್ಷಣವು ಪುಸ್ತು—ಪರ್ಶಿಯನ್ ಭಾಷೆಗಳಲ್ಲಿ ನಡೆಯುತ್ತಿತ್ತು. ಉನ್ನೀಸ್—ಕಾಬೂಲ--ಮುಂತಾದ ಪ್ರಸಿದ್ಧ ಜನಪ್ರಿಯ ಪತ್ರಿಕೆಗಳ ಭಾಷೆಯೂ ಅದೇ ಆಗಿದೆ. ಇತ್ತೀಚಿನ ಶಿಕ್ಷಣ ರಂಗದಲ್ಲಿ ಮಹತ್ವದ ಬದಲಾವಣೆ ನಡೆಯುತ್ತಲಿರುವದು ನಮಗೆ ಗಮನಾರ್ಹವಾಗಿದೆ. ಯಾಕಂದರೆ ಈ ದಿಶೆಯಲ್ಲಿ ಅವರ ವಿಚಾರ ಮುಂದೆ ಮುಂದೆ ಹರಿದು ನಮ್ಮ ಸಂಸ್ಕೃತ ಭಾಷೆಯನ್ನೂ ಸಂಗಮಿಸುತ್ತದೆ. ತಮ್ಮ ಮಾತೃಭಾಷೆಯ ಕೋಶವನ್ನು ಸುದೃಢವಾಗಿ-ಸುಂದರವಾಗಿ ವಿಶಾಲಗೊಳಿಸುವವರೆಗೂ ವಿಚಾರ ನಡೆದಿದೆ. ಅಫಘಾನೀ ಭಾಷೆಯು ಒಂದು ಸಾಮಾನ್ಯ ಮಟ್ಟದೆಂದು ಭಾವಿಸಬಹುದು. ಅದರಲ್ಲಿ ಶಬ್ದ ನಿಯಮವು ಅಷ್ಟೊಂದು ಸುಸಂಬದ್ಧವಾಗಿಲ್ಲವೆಂದು ತಿಳಿಯುತ್ತದೆ. ಇತ್ತೀಚಿನ ಶೋಧನೆಯಿಂದ ಅಫಘಾನೀ ಭಾಷೆಗಳು ಸಂಸ್ಕೃತದ ಪ್ರತಿಬಿಂಬಿತವೆಂದು ಕಾಣಬರುತ್ತಿದೆ. ಅಫಘಾನದ ಭಾಷಾ ಶಾಸ್ತ್ರಜ್ಞರು ಸಂಸ್ಕೃತದ ಅಪಭ್ರಂಶವಾದ ಅನೇಕ ಶಬ್ಧಗಳು ತಮ್ಮ ಭಾಷೆಯಲ್ಲಿರುವದರಿಂದ ತಮ್ಮ ಭಾಷೆಯೂ ಸಂಸ್ಕೃತ ಮೂಲವೆಂಬದನ್ನು ಮನಗಂಡಿದ್ದಾರೆ. ಈ ಕಾರಣದಿಂದ ತಮ್ಮ ಮಾತೃ ಭಾಷೆಯನ್ನು ಸರಳವಾಗಿ-ಸುಂದರವಾಗಿ ಶುದ್ಧವಾಗಿ ರೂಪಿಸಿ ಸಂಸ್ಕಾರಕೊಟ್ಟು ಬೆಳೆಸಲು ಸಂಸ್ಕೃತವಲ್ಲದೆ ಅನ್ಯಥಾ ಅಸಾಧ್ಯ ಎಂದು ಅವರು ತಿಳಿದದ್ದು ಸ್ವಾಭಾವಿಕ. ಅದಕ್ಕಾಗಿ ಕಾಲೇಜು—ವಿಶ್ವವಿದ್ಯಾಲಯಗಳಲ್ಲಿ ಸಂಸ್ಕೃತವನ್ನು ಕಡ್ಡಾಯ ಶಿಕ್ಷಣವನ್ನಾಗಿ ಪರಿವರ್ತಿಸಿದ್ದಾರೆ. ಸಂಸ್ಕೃತವೊಂದು ಅತ್ಯುಚ್ಚ ಶಿಕ್ಷಣವೆನ್ನುವ ಗೌರವ

 

ಭಾವನೆ ತುಂಬಿದ ಅಫಘಾನ ವಿದ್ಯಾರ್ಥಿಗಳು ನಮ್ಮ ಭಾರತದ ವಿದ್ಯಾರ್ಥಿಗಳಿಗೆ (ಸಂಸ್ಕೃತವನ್ನು ತಿರಸ್ಕರಿಸುವ ವಿದ್ಯಾರ್ಥಿಗಳಿಗೆ) ಅನುಕರಣೀಯರಾಗಿದ್ದಾರೆ. ತಾಯಿ ಭಾಷೆಯ ಪೋಷಕ ಭಾಷೆಯಿಂದ ಆದರದಿಂದ ಅವರು ಸುಲಭವಾಗಿ ಕಲಿಯುತ್ತಿದ್ದಾರೆ. ಕುಶಲ—ಕಶುಲ, ಪ್ರಹಾರ—ಪರ್‌ಹಾರ್, ಮಹೇಷ್—ಮೇಶ್, ಮೇಷ್—ಮೇಜ್ಷ, ರಾಶಿ—ರಾಶ್, ಶಾಲ—ಶೋಲ್ ಮುಂತಾದ ಅನೇಕ ಸಂಸ್ಕೃತ ಸಂಬಂಧವುಳ್ಳ ಅಫಘಾನ್ ಭಾಷಾ ಶಬ್ದಗಳನ್ನು ನೋಡಿ ಅಲ್ಲಿಯ ಸುಪ್ರಸಿದ್ಧ ಪತ್ರಿಕಾಕರ್ತರಾದ ಜನಾಬ್ ಮಹಮುದ್ ಹಾಶೀಮ್‌ರಂಥ ಮೇಧಾವಿಗಳು ತಮ್ಮಲ್ಲಿಯ ಉಚ್ಚ ಶಿಕ್ಷಣಕ್ಕೆ ಸಂಸ್ಕೃತವು ಅನಿವಾರ್ಯವಾದದ್ದು ಎಂದು ಉದ್ಗರಿಸುತ್ತಿದ್ದಾರೆ. ಅಲ್ಲಿಂದ ಭಾರತಕ್ಕೆ ಬಂದ ಶಿಷ್ಟ ಮಂಡಲದ ಧುರೀಣರೂ ಸಂಸ್ಕೃತವು ತಮ್ಮ ಶಿಕ್ಷಣದ ಆಧಾರಸ್ತಂಭವೆನ್ನುತ್ತಿರುವದು ನಮಗೆಲ್ಲ ಒಂದು ಬಗೆಯ ಅಭಿಮಾನ ಹುಟ್ಟಿಸುವದು. ಅಫಘಾನ ಯುನಿವರ್ಸಿಟಿಯ ಸಂಸ್ಕೃತ ಪ್ರೊಫೆಸರರಾದ ಪಂಡಿತ ಪರಮಾನಂದ ವ್ಯಾಕುಲ ಮಹಾಶಯರು ಇಂಗ್ಲೀಷ್—ಜರ್ಮನ್—ಫ್ರೆಂಚ್—ಅಫಘಾನ್—ಸಂಸ್ಕೃತ ಮುಂತಾದ ಭಾಷಾಭಿಜ್ಞರು. ಇವರ ಪ್ರತಿಭೆಯಿಂದ ಎಲ್ಲ ವಿದೇಶ ಭಾಷೆಗಳಲ್ಲಿಯ ಸಂಸ್ಕೃತ ಸಾಹಿತ್ಯವನ್ನು ದೊಡ್ಡ ಪ್ರಮಾಣದಲ್ಲಿ ಸಂಗ್ರಹಿಸುವ ಯೋಜನೆಯಾಗಿ ಭಾರತದಿಂದಲೂ ಮುನ್ನೂರು ಪುಸ್ತಕಗಳು ಈ ಮೊದಲೇ ಪ್ರೇಷಿತವಾಗಿದೆ. ಈ ಸಂಸ್ಕೃತ ಶಿಕ್ಷಣದ ಪ್ರಭಾವದಿಂದ ಅಫಘಾನದ ಯುವಕ ವಿದ್ಯಾರ್ಥಿಗಳು ಭಾರತ ಸಂಸ್ಕೃತಿಯ ಮಹತ್ವವನ್ನು ಮನಮೆಚ್ಚಿ ಗೌರವಿಸುತ್ತಿದ್ದಾರಲ್ಲದೆ ಭಾರತ—ಮತ್ತು ಭರತ ಸಂಸ್ಕೃತಿ—ಮತ್ತು ಭಾರತೀಯ ಜನಾಂಗ ಮುಂತಾದ ಇಲ್ಲಿಯದೇ ವಿವಿಧ ವಿಷಯಗಳನ್ನೊಳಗೊಂಡ ಒಂದು ಮಾಸಿಕ ಪತ್ರಿಕೆಯನ್ನು ಸಂಸ್ಕೃತದಲ್ಲಿ ವಿಶ್ವವಿದ್ಯಾಲಯ ವಿದ್ಯಾರ್ಥಿಗಳು ಪ್ರಕಟಿಸುತ್ತಿರುವದು ನಿಜವಾಗಿ ಅಭಿಮಾನಾಸ್ಪದ; ಅಭಿನಂದನೀಯ.

ಸಂಸ್ಕೃತ ಶಿಕ್ಷಣಕ್ರಮವು ಈಶ್ವರಚಂದ್ರ ವಿದ್ಯಾಸಾಗರರ "ರುಜು ಪಥ" ಗ್ರಂಥದಿಂದಾರಂಭಿಸಿ ಕಾವ್ಯ ಛಂದಸ್—ನಾಟಕ—ಗೀತಾ

ಮುಂತಾದವುಗಳನ್ನೊಳಗೊಂಡು ವಿಷ್ಣು ವಾಯು — ಅಗ್ನಿ — ಭಾಗವತ ಪಂಚಮಸ್ಕಂಧ ಮುಂತಾದ ಪೌರಾಣಿಕ ಕೆಲವಂಶಗಳಿಂದ ಪರ್ಯವಸಾನಗೊಳ್ಳುವದು. ಒಟ್ಟಾರೆ ಇಷ್ಟು ಹೇಳಬಹುದು. ಅಫಘಾನ ಶಿಕ್ಷಣ ಪ್ರಣಾಲಿಯು ಸಂಸ್ಕೃತದ ಆಧಾರದಿಂದ ಅತ್ಯುಚ್ಚಮಟ್ಟವೇರುವದೆಂದು ಅಫಘಾನರ ದೃಢವಾದ ನಂಬಿಗೆ.

## ಕಲಾ ಸಂಸ್ಕೃತಿ—ಸಂಬಂಧ

ಕಲೆಯ ದೃಷ್ಟಿಯಿಂದಲೂ ಅಫಘಾನವು ಭಾರತವನ್ನು ಸಮೀಪಿಸುವದು. ಈ ಗಾಂಧಾರವನ್ನು ನಿಸರ್ಗವು ಭಾರತ ಮಂದಿರದ ಮಹಾದ್ವಾರವನ್ನಾಗಿ ನಿರ್ಮಿಸಿದೆಯೆಂಬುದು ತಿಳಿದ ಮಾತಾಯಿತು. ಈ ದ್ವಾರ ಪರದೆಯ ಮೇಲೆ ಮೂಡಿ ಮಿಂಚುವ ಭಾರತೀಯ ಸಂಸ್ಕೃತಿ — ಕಲಾ ಸೌಂದರ್ಯ ಮುಂತಾದವುಗಳ ನಿಕಟ ಪ್ರಭೆಯು ಸಂಶೋಧನಾ ದೃಷ್ಟಿಗೆ ಕುತೂಹಲ ಜನಕವೂ—ಮನೋರಂಜಕವೂ ಆಗಿದೆ. ಐತಿಹಾಸಿಕ ಜೀವನ ಕ್ಷೇತ್ರದಲ್ಲಿ ಭಾರತೀಯತೆಯನ್ನು ಪರಿಪೂರ್ಣವಾಗಿ ಆಚ್ಛೊತ್ತಿನಿಂತ-ಅಖಂಡ ಭಾರತದ ಸೀಮಾಂತ ರೇಖೆ ರೂಪಿಸುವ ಅವಶೇಷಗಳನ್ನು ನಿಚ್ಚಳವಾಗಿ ಅಫಘಾನದ ಕಲೆಗಳು ತೋರಿಸುವದೆಂದರೆ ಆಶ್ಚರ್ಯವಲ್ಲವೇ. ಭೂಗರ್ಭ ಮುಂತಾದ ಸಂಶೋಧನೆಗಳಿಂದ ಅಫಘಾನ ಭಾರತಗಳ ಏಕರೂಪತೆಯು ಮತ್ತೂ ಉಜ್ವಲಗೊಳ್ಳುವಾಗ ಅದನ್ನು ತಿಳಿದು ತೃಪ್ತಿಯ ಭಾಗ್ಯ ಪಡೆಯುವ ಭಾರತೀಯನ ಹಕ್ಕನ್ನು ಇಲ್ಲಿ ಉಪಯೋಗಿಸೋಣ.

ಭಾರತ—ಅಫಘಾನಗಳ ಸಂಬಂಧವನ್ನು ಇತಿಹಾಸ ಕಾಲಕ್ಕಿಂತ ಮುಂಚಿನದು ಇಷ್ಟು ಸುಸ್ಪಷ್ಟವಾಗಿ ಸಿಗುವಂತಿಲ್ಲ. ಯುನಾನ್ ಸಾಮ್ರಾಟ್‌ನಾದ ಸಿಕಂದರ್ ಬಾದಶಹನಿಗಿಂತ ಮುಂಚೆ ಅಫಘಾನವನ್ನು ಇರಾಣದ "ದಾರಯಬುಶ ಕಾರ್ಷಬುಷ" ಮುಂತಾದ ಪ್ರಸಿದ್ಧ ರಾಜವಂಶಜರು ಆಳುತ್ತಿದ್ದರೆಂದು ತಿಳಿಯುವದು. ನಂತರ ಗಾಂಧಾರವು ಅಲೆಗ್ಸಾಂಡರ್ ಅಂದರೆ ಸಿಕಂದರ್ ಬಾದಶಹನ ಸ್ವಾಧೀನವಾಯಿತು. ಇದರಿಂದ ಭಾರತದ ಕೆಲಭಾಗಗಳು ಇವನಿಗೆ ಅಂಕಿತವಾದಂತಾಯಿತು.

ಈ ಕಾರಣವಾಗಿ ಪಶ್ಚಿಮೋತ್ತರ ಭಾರತದಲ್ಲಿ ಭಯಂಕರ ರಾಜಕೀಯ ಕ್ರಾಂತಿಯುಂಟಾಯಿತು. ಈ ಪರಿಣಾಮದಿಂದ ಸಿಂಧು ನದೀ ತೀರದಲ್ಲಿ ಮೌರ್ಯರ ರಾಜಪತಾಕೆ ಮೆರೆಯತೊಡಗಿತು. ಅನಂತರ ಇಪ್ಪತ್ತು ವರ್ಷಗಳ ಮೇಲೆ ಭಾರತಾಕ್ರಮಣಕ್ಕೆ ಬಂದ ಸೆಲ್ಯೂಕಸ್ ಸಮ್ರಾಟನು ಮೌರ್ಯ ಸಮ್ರಾಟ್ ಚಂದ್ರಗುಪ್ತನಿಗೆ ಸೋತು ಕಾಬೂಲ-ಕಂದಹಾರ-ಹಿರಾತ-ಮಕರಾನ್ ಮುಂತಾದ ಅಪಘಾನದ ರಾಜಕೀಯ ಭಾಗಗಳೊಂದಿಗೆ ತನ್ನ ಮಗಳನ್ನೂ ಒಪ್ಪಿಸಿದನು. ಹೀಗೆ ಯುನಾನರ ಕೈ ತಪ್ಪಿದ ನಂತರ ಅಪಘಾನ ಭಾರತಗಳ ಬೆಸಿಗೆಯ ನಾಂದಿಯನ್ನು ಇತಿಹಾಸವು ಇಲ್ಲಿಂದಲೇ ಚೆನ್ನಾಗಿ ಆರಂಭಿಸಿವೆ.

ಮುಂದೆ ಕುಶಾನ ರಾಜರ ಕಾಲದಿಂದ ಗಾಂಧಾರದ ಕಲಾ ಸಂಸ್ಕೃತಿಗಳು ಭಾರತದಂತೆ ವೈಶಿಷ್ಟ್ಯಪೂರ್ಣವಾಗಿ ಬೆಳೆಯಲಾರಂಭಿಸಿದವು. ಇದೇ ರೀತಿಯಿಂದ ಕನಿಷ್ಕ-ಹುನಿಷ್ಕ ಮುಂತಾದವರ ಆಳಿಕೆಯಲ್ಲೂ ಇಲ್ಲಿಯ ಕಲೆಯು ವೈಭವಸಂಪನ್ನವಾಯಿತು. ಮುಂದೆ ತುಸು ಕಾಲ ಗಾಂಧಾರದ ರಾಜಕೀಯವು ತುಸು ಬೇರೆಯಾದರೂ ಕಲಾ ಸಂಸ್ಕೃತಿಗಳು ಮಾತ್ರ ಇಲ್ಲಿಯ ಜೀವನದಲ್ಲಿ ಬೆರೆತೇ ಉಳಿದವು. ನಂತರ ಗಾಂಧಾರದ ಕಲಾಕ್ಷೇತ್ರಗಳು ದ್ವಿತೀಯ ಶತಕದಿಂದಾರಂಭಿಸಿದವು. ಜಲಾಲಾಬಾದದ ಸಮೀಪ ಪ್ರದೇಶಗಳಲ್ಲಿ ಹದ್ದಾ-ಐವಕ-ವಾತ್ತಿಯಾನ-ಬೆಗರಾಮ್-ಕಾಂಪಿಶ ಮತ್ತು ಅಕ್ಷವತಿ ನದಿಯ ಪಶ್ಚಿಮ ತೀರದ ಕುಂದೂಜ ಮುಂತಾದ ಬಹುಭಾಗಗಳಲ್ಲಿ ಕಂಗೊಳಿಸುವ ಕಲಾವಶೇಶಗಳು ತಲೆದೂಗಿಸುವಂತಿವೆ. ಬೌದ್ಧಕಾಲಿಕ ಮೂರ್ತಿ-ಸ್ತೂಪ-ವಿಹಾರಾದಿಗಳಲ್ಲಿ ಚಿಮ್ಮುವ ಕಲಾ ಸೌಂದರ್ಯವು ಭಾರತೀಯ ಕಲಾ ಕೇಂದ್ರವಾದ ತಕ್ಷಶಿಲೆಯ ಕಲೆಯನ್ನು ಸಕಲ ರೀತಿಯಿಂದಲೂ ಅನುಕರಿಸುತ್ತದೆ.

ಕಾಬೂಲದಿಂದ ಇಪ್ಪತ್ತೈದು ಕ್ರೋಶ ದೂರದಲ್ಲಿಯ ಬೆಗರಾಮ್ ಎಂಬದು ಹಸ್ತಿದಂತ ಮೂರ್ತಿಗಳ ಹೆಸರಾಂತ ಸ್ಥಳ. ಗಾಂಧಾರ ಕಲೆಯ ಅದ್ಭುತ ಕೌಶಲ್ಯವನ್ನು ಇಲ್ಲಿ ಮನಗಾಣುವಂತಿದೆ. ಮಥುರೆಯಲ್ಲಿ ದೊರೆತ ಹಸ್ತಿದಂತ ಮೂರ್ತಿಗಳಿಗಿಂತ ಇಲ್ಲಿಯವು ಮತ್ತೂ ಮಿಗಿಲಾದ

ವುಗಳು. ಹೀಗೆ ಇಲ್ಲಿಯ ಕಲೆಯ ಅದ್ಭುತ ಸೌಂದರ್ಯದ ಮಾಟವು ಉನ್ನತಿಯ ಸ್ವರ್ಗವನ್ನು ಸೂರೆಗೈಯ್ಯಲು ಹೊರಟಿರುವಾಗ ಹೂಣ ರಾಜರ ಭೀಕರ ದಾಳಿಯು ಎಲ್ಲವನ್ನೂ ಹಾಳುಗೆಡಿಸಿತು. ಕಲಾಮಂಟಪ ವೆನಿಸಿದ ಕಂದಹಾರವೂ ಈ ಹಾವಳಿಯಲ್ಲಿ ಸುಟ್ಟು ಮಸಣವಾಗಿ ಇಲ್ಲಿಯ ಜೀವನ-ಕಲೆಗಳಲ್ಲಿ ನಿರ್ಜೀವ ಕಳೆ ತುಂಬಿತೆನ್ನಲಡ್ಡಿಯಿಲ್ಲ. ಒಂಬತ್ತನೆ ಶತಕದ ಇಂಥ ಪರಿಣಾಮದಿಂದ ಗಾಂಧಾರದ ಕೋಟೆಯು ಇಸ್ಲಾಮರದಾಯಿತು. ಈ ಇಸ್ಲಾಮ ಶತಕದಲ್ಲಿ ಧ್ವಂಸಗೊಂಡ ಇಲ್ಲಿಯ ಅಪೂರ್ವಕಲೆಗಳ ಅವಶೇಷಗಳನ್ನು ನಾವಿಂದು ಅಗೆದು ಅಗೆದು ಮಣ್ಣು ತೊಳೆದು ನೋಡುವಂತಾಯಿತು. ಕಲಾ ಕೊಸರಿನ ಪ್ರಾರಂಭ ದಿಶೆಯು ಕಾಂಪಿಶ ಕ್ಷೇತ್ರದಿಂದ. ಈ ಕಾಂಪಿಶವು ಕುರುಶ ರಾಜನಿಂದ ಪ್ರಭಾದಿತ ವಾಯಿತು. ಇಲ್ಲಿ ಬೌದ್ಧರ ಸ್ತೂಪವಿಹಾರಾದಿಗಳ ರಮಣೀಯ ದೃಶ್ಯವು ಕಣ್ಣು ಕುಕ್ಕುವಂತಿದೆ. ಇಲ್ಲಿ ಕಾಣುವ ಬುದ್ಧ ಪ್ರತಿಮೆಗಳೆರಡು ಅತ್ಯುಚ್ಚ ತರಗತಿಯದು. ಒಂದು ಮೂರ್ತಿಯಲ್ಲಿ ಜ್ವಲಿಸುವ ಅಗ್ನಿ-ಆಕಾಶದಲ್ಲಿ ವಿಹರಿಸುವ ಬ್ರಹ್ಮೇಂದ್ರರು-ಮತ್ತೊಂದು ಪಕ್ಕದಲ್ಲಿ ಕೈಜೋಡಿಸಿ ಬಾಗಿ ನಿಂತ ಒಬ್ಬ ರಾಜೇಂದ್ರ. ಇನಿಷ್ಟು ವಿಚಿತ್ರದ ದೃಶ್ಯಗಳು ಚಿತ್ತವೇಧಕ ವಾಗಿವೆ. ಮತ್ತೊಂದು ಮೂರ್ತಿಯು ಭೋಧಿಸತ್ವದ ಚಿತ್ರಾಂಕಿತ ವಾದದ್ದು. ಇದಕ್ಕೆ ಈಗಲೂ ಕೆಲ ವಿದೇಶೀಯರು ಹರಕೆ ಹರಣ ಸಲ್ಲಿ ಸುವ ರೂಢಿಯಿರುವದು ನಿಜವಾಗಿ ಆಶ್ಚರ್ಯಜನಕ. ಕನಿಷ್ಕ ರಾಜನ ಗುರುತು ಹೇಳುವ ಇನ್ನಿತರ ಅಪೂರ್ವ ದೃಶ್ಯಗಳ ಅವಶೇಶವನ್ನು ಈ ಕಾಂಪಿಶದಲ್ಲಿ ನೋಡಿದರೆ ನಿಜವಾದ ಕಲೋಪಾಸಕನ ಕಣ್ಣಲ್ಲಿ ನೀರುಕ್ಕು ವದು ಇದೊಂದೇ ಭಾಗದಲ್ಲಿ ನೂರಾರು ಬೌದ್ಧ ವಿಹಾರಗಳು ರಂಜಿಸು ತ್ತಿದ್ದವು. ಇವುಗಳಲ್ಲಿ ಆರು ಸಾವಿರ ಮಹಾಯಾನ ಪಂಥದ ಬೌದ್ಧರು ಇರುತ್ತಿದ್ದರೆಂದು ಪ್ರಸಿದ್ಧ ಚೀನಾ ಪ್ರವಾಸಿಯ ಉಲ್ಲೇಖ.

ಯುನಾನರ ಪ್ರಭಾವಕ್ಕೆ ಬಿದ್ದ "ಬಲಖ"ದಲ್ಲಿ ಇನ್ನೂರು ಫೂಟು ಉನ್ನತವಾದ ಸುಂದರ ಸ್ತೂಪವು ಇನ್ನೂ ಹಲವು ಸ್ತೂಪಗಳೊಂದಿಗೆ ಕಾಣುತ್ತಿದೆ. ಇಲ್ಲಿ ಹುನಿಷ್ಕ ರಾಜನ ಕಾಲದ ಶಿಲಾಲೇಖ, ಖೋತಾನ ರಾಜನ ಕಾಲದ ಮುದ್ರೆ ಮುಂತಾದವುಗಳು ಅಂದಿನ ಅಫಘಾನ-

ಚೀನೀಯ ತುರ್ಕಸ್ಥಾನಗಳಲ್ಲಿ ವೈದಿಕ—ಮತ್ತು ಬೌದ್ಧ ಈ ಎರಡೂ ಧರ್ಮಗಳನ್ನು ವ್ಯಕ್ತಪಡಿಸುತ್ತವೆ. ಅವರ ಕಾಲದಲ್ಲಿ "ಲಘುರಾಜಗೃಹ"ವೆಂದು ಕರೆಯುತ್ತಿದ್ದ ಈ ಬಲಖ ಪ್ರಾಂತದ ಸುಂದರ ಬೌದ್ಧ ವಿಹಾರಗಳಲ್ಲಿ ಮೂರು ಸಾವಿರ ಹೀನಯಾನ ಪಂಥದವರು ಇರುತ್ತಿದ್ದರು.

ಇನ್ನೊಂದು ಐಬಕ ಎನ್ನುವಲ್ಲಿಯೂ ಇದರಂತೆ ಅನೇಕ ವಿಹಾರ ಮಂದಿರಗಳಿವೆ. ಈ ಭಾಗವು ಹಿಂದುಕುಶ್ ಪರ್ವತದ ತಳಪ್ರದೇಶ. ಇದು ತುರ್ಕಿಸ್ಥಾನದ ಪ್ರಸಿದ್ಧ ಮಾರ್ಗವೆನಿಸಿದೆ. ಇಲ್ಲಿಯ ಭಗ್ನಾವಶೇಷಗಳಲ್ಲಿ ಕೆಲವು ಭಾರತವನ್ನೂ ಮಿಕ್ಕಿವೆ. ಎಪ್ಪತ್ತು ಫೂಟು ಸುತ್ತಳತೆಯ ಐವತ್ತು ಫೂಟು ಎತ್ತರದ ಒಂದು ಸ್ತೂಪವು ಅಪೂರ್ವ ಕೌಶಲ್ಯವಾಗಿ ತೋರುವುದು. ಇದರ ತುದಿ ಬಾಗವು ಗೋಲವಾಗಿರದೆ ಚೌಕಾಗಿದ್ದರಿಂದ ಇದು ಆಕಾಶವನ್ನೇ ಆಧರಿಸಿದಂತೆ ಕಾಣುವದು ಇನ್ನೂ ಅನೇಕ ಸ್ತೂಪ ಗುಹಾ-ಸಮಾಧಿ-ಮಂದಿರಗಳ ವರ್ಣನೆಯು ಫಾಹಿಯಾನ್ ಪ್ರವಾಸಿಯ ಉಲ್ಲೇಖದಲ್ಲಿದೆ.

ವಾತ್ತಿಯಾನ ಪ್ರದೇಶದಲ್ಲಿಯ ಬೌದ್ಧ ವಿಗ್ರಹಗಳು ಅತ್ಯುನ್ನತವಾಗಿವೆ. ಒಂದು ಮೂರ್ತಿಯು ನೂರ ಇಪ್ಪತ್ತೈದು ಫೂಟು ಎತ್ತರವಿದ್ದರೆ, ಮತ್ತೊಂದು ನೂರೈವತ್ತು ಫೂಟು ಉನ್ನತವಾದದ್ದು ಮೂರನೆಯದು ಮತ್ತೂ ಮಹೋನ್ನತ ಮೂರ್ತಿ. ಎಂದರೆ ನೂರ ಎಂಬತ್ತೈದು ಫೂಟಿನದು. ಇಂಥ ಗಗನ ಚುಂಬಿತ ಮೂರ್ತಿಗಳಿರುವ ಈ ಭಾಗದಲ್ಲಿ ಚೀನಾ ಪ್ರವಾಸಿ ಹ್ಯುವೆನ್‌ತ್ಸಾಂಗ್‌ನು ಕೆಲ ಕಾಲವುಳಿದಿದ್ದನು. ಈ ವಾತ್ತಿಯಾನವು ಲೋಕೋತ್ತರವಾದಿಗಳಾದ ಸಹಸ್ರಾರು ಬೌದ್ಧರ ಬೀಡೆನಿಸಿತ್ತು. ಇನ್ನು ಪೇಶಾವರ (ಪುಷ್ಪಪುರ)-ಬಲಖಗಳ ಮಧ್ಯವರ್ತಿಯಾದ ಕಾಬೂಲವು ಕಣಿವೆಯ ಪ್ರದೇಶವಾದ್ದರಿಂದ ಇಲ್ಲಿಯ ಕಲಾ ರಚನೆಗಳಲ್ಲಿ ಮತ್ತೊಂದು ಬಗೆ ಕಾಣುವದು ಸಹಜ. ಇಲ್ಲಿಯು ಕಲೆಯು ಕುಡಿಗೊಳ್ಳುವ ಕಾಲದಲ್ಲಿ ಭಾರತದೊಳಗೆ ಬೌದ್ಧಧರ್ಮದ ಪ್ರಕಾಶವು ಪರಿಪೂರ್ಣವಾಗಿತ್ತು. ಇದರಿಂದ ಭಾರತ ಗಾಂಧಾರದ ಕಲಾಸಂಸ್ಕೃತಿ ಸಂಬಂಧವು ಪರಸ್ಪರ ಎರಕಗೊಳ್ಳಲು ಮತ್ತೂ ಕಾರಣವಾಯಿತು.

ಇದೇ ಸಮಯ ಭಾರತವಲ್ಲಿ ಅಂತರ್‌ರಾಷ್ಟ್ರೀಯ ಸಾಂಸ್ಕೃತಿಕ ಚರ್ಚಾಕೂಟವಾಗುತ್ತಿತ್ತೆಂದು ಕಾಣಬರುವದು. ಮಥುರೆಯಲ್ಲಿ ನಡೆದ ಇಂಥದೊಂದು ಚರ್ಚಾಕೂಟಕ್ಕೆ ಅಫಘಾನ ಕಾಬೂಲ ಸಮೀಪದ 'ಜಲಾಲಾಬಾದ' ಎಂಬಲ್ಲಿಯ ಪಂಡಿತನು ನಿಮಂತ್ರಿತನಾಗಿದ್ದ ವಿಷಯವು ಮಥುರೆಯಲ್ಲಿ ದೊರೆತ ಮುದ್ರಾಂಕಿತವೊಂದರಿಂದ ತಿಳಿಯುವದು. ಇದರ ಬರವಣಿಗೆಯು ಅಂದಿನ ಪ್ರಚಲಿತ "ಖರೋಷ್ಠಿ" ಎಂಬಲ್ಲಿವೆ ಬದ್ಧವಾದದ್ದು.

ಹೀಗೆ ಕಾಂಪಿಶ, ಬಲಖ, ಐಬಕ, ಕಾಬೂಲ, ವಾತ್ತಿಯಾನ ಇತ್ಯಾದಿ ಪ್ರದೇಶಗಳಲ್ಲದೆ ಗಾಂಧಾರದ ಇನ್ನಿತರ ಪ್ರದೇಶಗಳಲ್ಲಿ ಅದೆಷ್ಟು ಕಲಾ ಸೌಂದರ್ಯಗಳು ಸಂಸ್ಕೃತಿ ವೈಶಿಷ್ಟ್ಯಗಳು ಮಣ್ಣಿನ ಆಳದಲ್ಲಿವೆಯೋ ಯಾರಿಗೆ ಗೊತ್ತು. ಭಾರತ ಗಾಂಧರಗಳ ರಾಜಕೀಯ-ಸಂಸ್ಕೃತಿ—ಕಲೆಗಳ ಮೇಲೆ ಇನ್ನೂ ಹೆಚ್ಚಿನ ಸಂಬಂಧ ಬೀರುವ ದೃಶ್ಯಗಳು ಸಂಶೋಧನೆಯಲ್ಲಿ ಸಿಗದೆಂದು ಹೇಳಲು ಹೇಗೆ ಸಾಧ್ಯ. ಕಲ್ಪನೆಗೂ ನಿಲುಕದಂಥ ಸಂಬಂಧ ತೋರಿಸುವ ವಸ್ತುಗಳು ಸಂಶೋಧಿಸಿದಷ್ಟೂ ಸಿಗುತ್ತಲೇ ಇರುವಾಗ ಅದೊಂದು ಮಹಾ ಹುಚ್ಚನ್ನೇ ಹಿಡಿಸಬಹುದೆಂದರೆ ಅಚ್ಚರಿಯಲ್ಲ. ಆದ್ದರಿಂದ ಸಂಶೋಧನೆಯೆಂಬ ಹುಚ್ಚು ಹೊಳೆಯಾಗಿ ಅನೇಕ ಧೀಮಂತರ ವಿಹಾರ ಕೇಂದ್ರವಾಗಿದೆ. ತೀರವರ್ತಿಗಳಾದ ಸಾಮಾನ್ಯರಿಗೆ ಇದು ವಿಕಾಸ ಕೇಂದ್ರವೂ ಹೌದು.

ಈ ದೃಷ್ಟಿಯಿಂದ ಗಾಂಧಾರದ ಸಂಶೋಧನೆಯ ಹುಚ್ಚು ಫ್ರಾನ್ಸಿನ ಭೂಗರ್ಭ ಶಾಸ್ತ್ರಜ್ಞರನ್ನೂ ಆಮಂತ್ರಿಸಿದೆಯೆಂದರೆ ಅದೇನು ಹೆಚ್ಚಿನದಲ್ಲ. ಭಾರತ ಅಫಘಾನಗಳ ಕಲಾ ವೈಭವ-ಸಂಸ್ಕೃತಿ ವೈಶಿಷ್ಟ್ಯ-ಧಾರ್ಮಿಕ ಸಂಬಂಧ—ಮುಂತಾದ ಅಭಿನ್ನ ಸೌಂದರ್ಯದ ಪುನರಾವೃತ್ತಿಯು ಬೆಳೆದು ಬೆಳಗಲಿ.

ಅನಾದಿಯಿಂದ ಭಾರತದ ರಾಜಕೀಯ ಪ್ರದೇಶವಾಗಿದ್ದ ಅಫಘಾನವು ಉರ್ವರ ಗಾಂಧಾರ-ಕಂದಹಾರ-ಅಫಘಾನ ಮುಂತಾದ ಹೆಸರುಗಳಿಂದ ಪರಿಚೇದಗೊಳ್ಳುತ್ತ ಬಂದಿದೆ. ಅಖಂಡ ಭಾರತವೂ ಖಂಡವಾಗಿ ಒಡೆಯುತ್ತ ಹಿಂದುಸ್ಥಾನ-ಅಫಘಾನಿಸ್ಥಾನ್— ಪಾಕಿಸ್ತಾನ್—

ಎಂದು ಪ್ರತ್ಯೇಕವಾಗುತ್ತಿವೆ. ಇತಿಹಾಸದಲ್ಲಿ ಇದೆಂಥ ಅದ್ಭುತ ವ್ಯತ್ಯಾಸ, ಒಂದೇ ಜನಾಂಗ ಒಂದೇ ಸಂಸ್ಕೃತಿಯುಳ್ಳದ್ದು ಅದೆಷ್ಟು ಭಿನ್ನ ಭಿನ್ನ. ಕಾಲನ ಇದೆಂಥ ಕ್ರಾಂತಿ ಲೀಲೆ. ಕಾಲದ್ದಕ್ಕೆ ಪಠಾಣಿ ಸ್ಥಾನವೂ ಒಂದು ತಲೆತೊನೆಯುತ್ತಿದೆ. ಇದರ ಹೊರತಾಗಿ ಮತ್ತಾವ "ಸ್ತಾನ್"ದ ಗಾಳಿ ಏಳುವದೋ ಏನೋ! ಪಠಾಣೀಸ್ಥಾನದ ಅಂದರೆ ಸರಹದ್ದ ಪ್ರಾಂತದ ಮೂವತ್ತು ಲಕ್ಷ ಪಠಾಣರ ಈ ಪ್ರತ್ಯೇಕ ಪ್ರಾಂತವಾದವು ಐನೂರು ಐವತ್ತು ಮೈಲು ವಿಸ್ತರಣ ಭೂಮಿಯಲ್ಲಿ ಚಿತ್ರಾಲ ಪರ್ವತದಿಂದ ಬಲೂಚಿಸ್ಥಾನದ ಬಾನೋ ಸೀಮಾಂತದಲ್ಲಿ ಮುಕ್ತಾಯಗೊಳ್ಳುವದು. ಈ ಪ್ರದೇಶದಲ್ಲಿಯೂ ಪ್ರಾಚೀನ ಸಂಸ್ಕೃತಿಯ ಅವಶೇಷಗಳು ದೊರೆಯುತ್ತಿವೆ. ಆದರೆ ಪಠಾಣಿಸ್ಥಾನವಾದರೆ ಅದು ಗಾಂಧಾರದ ಗರ್ಭದಲ್ಲಿ ಬೀಳುವ ನಿರೀಕ್ಷಣೆಯಿದೆ. ಹೀಗೆಯೇ ಮೆಲ್ಲನೆ ಇತರ ಎಲ್ಲ ಲಿಂಗಗಳೂ ಬೆಸೆದು ಭಾರತವು ಮೊದಲಿನಂತೆ ಅಖಂಡ ರಾಷ್ಟ್ರವಾಗಲೂ ಬಹುದು. ಕಾಲನ ಚಂಚಲ ಚಕ್ರವು ಹೀಗೆಯೂ ತಿರುಗಬಲ್ಲದು. ಪುನಃ ಒಂದೇ ಸಂಸ್ಕೃತಿ–ಒಂದೇ ಜನಾಂಗ ಒಂದೇ ಭಾವನೆ ಎನ್ನುವ ಆದರ್ಶ ನಿರ್ಮಾಣವು ಇತಿಹಾಸಕ್ಕೆ ವಿರುದ್ಧವಲ್ಲ. ಕಾಲನಿಗೆ ಅಸಾಧ್ಯವಲ್ಲ.

## ಸಂಸ್ಕೃತಿ – ಅಭಿಮಾನ

ಭಾರತ ಸಂಸ್ಕೃತಿಯ ಕುರಿತು ಹೆಮ್ಮೆ ಪಡುವ ಪ್ರತಿಭಾವಂತರೂ ಇಂದು ಅಫಘಾನದಲ್ಲಿದ್ದಾರೆ; ಪುಸ್ತು ಭಾಷಾ ಪರಿಷತ್ ಸಂಚಾಲಕರಾದ ಅಬ್ದುಲ್ ರಉಫ್ ಮಹಾಶಯರು ಭಾರತದ ಸಂಸ್ಕೃತಿ ಸಂಬಂಧ ಬೆಳೆಸುವದಕ್ಕಾಗಿಯೇ ಇಲ್ಲಿಗೆ ಬಂದದ್ದರಿಂದ ನಮಗೆ ಭಾರತ ಸಂಸ್ಕೃತಿಯಲ್ಲಿಯ ಅವರನಿಷ್ಟೆ ಎಷ್ಟಿದೆಯೆಂದು ತಿಳಿಯುವದು. ಅವರ ಭಾವನೆ ಹೀಗಿದೆ. ಅಫಘಾನ ಭಾರತಗಳೊಳಗಿನ ಸಂಸ್ಕೃತಿ ಸಂಬಂಧವನ್ನು ಮತ್ತಷ್ಟು ದೃಢವಾಗಿಸಲು ಇಚ್ಛೆಪಟ್ಟು ಇಲ್ಲಿಗೆ ಬಂದಿದ್ದೇನೆ. ಭಾರತ ಅಫಘಾನಗಳ ಜನಾಂಗವು ಅತ್ಯುಚ್ಚ ಆರ್ಯ ಪರಂಪರೆಯುಳ್ಳ ಜನಾಂಗ. ಎನ್ನುವದನ್ನು ಈ ಉಭಯ ರಾಷ್ಟ್ರಗಳ ಮುಖ್ಯ ಮಾತೃಭಾಷೆಯಾದ ಸಂಸ್ಕೃತವು ಸಾರುತ್ತದೆ. ಆದ್ದರಿಂದ ಮೂಲ ಒಂದೇ

ಸಂಸ್ಕೃತಿಯುಳ್ಳ ನಮ್ಮ ನಿಮ್ಮ ಚಿರಮೈತ್ರಿ ಅಬಾಧಿತವಾಗುವಂತೆ ಯತ್ನಿಸೋಣ. ಭಾರತ ಸಂಸ್ಕೃತಿಯ ಕುರಿತು ಅಬ್ದುಲ್ ಮಹಾಶಯರು ಹೀಗೆ ಹೇಳಿದರೆ ಸಂಸ್ಕೃತ ಶಿಕ್ಷಣದ ಕುರಿತು ಗಾಂಧಾರದ ಹೆಸರಾಂತ ಜನಪ್ರಿಯ 'ಅನ್ನೀಸ್' ಪತ್ರಿಕೆಯ ಸಂಪಾದಕರಾದ ಮಹಮದ ಹಾಶಿಮ್‌ರು ಹೇಳುವದೇಂದರೆ ನಾವು ಆರ್ಯರು ಆದ್ದರಿಂದ ನಮ್ಮ ಭಾಷೆಯು ಸಂಸ್ಕೃತದ ಅಂತರ್ಗತ ಭಾಷೆಯಾಗಿದೆ. ನಮಗೆ ಫಾರ್ಸೀ–ಅರಬೀ ಭಾಷೆಗಳಿಂದೇನೂ ಹೆಚ್ಚಿನ ಪ್ರಯೋಜನವಿಲ್ಲ. ಅವುಗಳನ್ನು ಸಾಮಾನ್ಯನು ತನ್ನಲ್ಲಿಯೇ ತಿಳಿಯುವಂತಿದೆ. ನಮ್ಮ ಕಾಲೆಜ್ ವಿಶ್ವವಿದ್ಯಾಲಯಗಳ ಶಿಕ್ಷಣ ಮಹತ್ವವು ಸಂಸ್ಕೃತವನ್ನೇ ಅವಲಂಬಿಸಿದೆ. ಈ ಕಾರಣವಾಗಿ ಸಂಸ್ಕೃತವನ್ನು ವಿದ್ಯಾರ್ಥಿಗಳೆಲ್ಲ ಸುಲಭವಾಗಿ ಸಂತೋಷವಾಗಿ ಉತ್ಸಾಹದಿಂದ ಕಲಿಯುತ್ತಿದ್ದಾರೆ. ಅಫಘಾನರು ಇಂದು ಧರ್ಮಾಂಧತೆಯನ್ನು ಒಪ್ಪಲಾರರು. ಸುಶಿಕ್ಷಿತ ತರುಣನು ತಾನು ಆರ್ಯ ಪರಂಪರೆಯವನೆಂದು ಹೆಮ್ಮೆಪಡುವನು ಇತ್ಯಾದಿ.

ಅಫಘಾನದ ಇನ್ನೂ ಕೆಲವು ಧುರೀಣ ಪ್ರತಿಭಾವಂತರ ಹೇಳಿಕೆ ಮತ್ತೂ ಉತ್ತಮವಿದೆ. ಅಫಘಾನ ಜನಾಂಗವು ಸ್ವಾತಂತ್ರ್ಯಕ್ಕೆ ಭಿನ್ನವಾದ ಯಾವ ಆದರ್ಶವನ್ನು ಒಪ್ಪಲಾರದು. ನಮಗೆ ಭಾರತದ ಸ್ವಾತಂತ್ರ್ಯ ಸಂಸ್ಕೃತಿಗಳಿಂದ ಅತ್ಯಂತ ಸಂತೋಷವಾಗುವದು. ಇತಿಹಾಸದ ಉಷಃಕಾಲದಿಂದಲೂ ಭಾರತ ಗಾಂಧಾರದ ಸ್ನೇಹ ಸಂಬಂಧವು ಗಾಢವಾಗುತ್ತ ಬಂದಿದೆ. ಭಾರತದ ಆದರ್ಶ ಸಂಸ್ಕೃತಿಯು ನಮಗೂ ಮಾರ್ಗದರ್ಶಕವಾಗಿದೆ. ಆದ್ದರಿಂದ ಗಾಂಧಾರದಲ್ಲಿ ವಿವಿಧ ಧರ್ಮೀಯರೆಲ್ಲರಿಗೂ ಸಮಾನ ಸ್ವಾತಂತ್ರ್ಯವಿದೆ. ನಾಗರೀಕತೆಯ ಮೇಲೆ ಕಲ್ಪಿಸೆಯುವಂಥ ಜಾತೀಯ ದುರ್ಭಾವನೆಗಳಿಗೆ ಅವಕಾಶವೇ ಇಲ್ಲ. ಗಾಂಧಾರದ ಹಿಂದುಗಳೂ ಗಾಂಧಾರದ ಪಠಾಣರನ್ನು ಉಚ್ಚ ಪರಂಪರೆಯವರೆಂದೇ ಆದರಿಸುತ್ತಿದ್ದಾರೆ. ಹಿಂದು ಪಠಾಣರನ್ನು ಇಲ್ಲಿ ರೂಪುರೇಖೆಗಳಿಂದ ಗುರುತಿಸಬಹುದು, ಹೊರತು ದೇಶ ಭಾವನೆಯಲ್ಲಿ ಎಲ್ಲರೂ ಒಂದೇ. ಅಫಘಾನದ ಧರ್ಮ ಪೀಠವು ಕುರಾನದ ಉಜ್ವಲ ವೇದಿಕೆಯ ಮೇಲೆ ನಿಂತಿದೆ. ಪವಿತ್ರ ಕುರಾನ ಗ್ರಂಥವನ್ನು ಕೆಲ ವಿದೇಶೀಯ ಅನು

ವಾದಗಳು ಕೆಡಿಸಿಬಿಟ್ಟವೆ. ಆ ಕಾರಣವಾಗಿ ಇಸ್ಲಾಮ್ ಜಗತ್ತಿನಲ್ಲಿ ಧರ್ಮಾಂಧತೆಯ ಕೊಳೆ ರೋಗವು ಕೆಲ ಭಾಗವನ್ನು ತಿನ್ನುತ್ತಲಿದೆ. ಎನ್ನುವ ವಿಷಯ ನಮಗೆ ಖೇದಜನಕವಾಗಿದೆ. ಇಸ್ಲಾಮದ ಆಸಹ್ಯ ಕಲಂಕಗಳನ್ನೆಲ್ಲ ತೊಳೆಯಲು ನಮ್ಮ ಕಳಕಳಿಯ ಯತ್ನ ವಿಚಾರಗಳಿವೆ. ಭಾರತ ಸಂಸ್ಕೃತಿಯೇ ತಮ್ಮ ಸಂಸ್ಕೃತಿಯೆನ್ನುವ ಅವರ ಅಭಿಮಾನದ ಮೇಲಿನ ಮಾತುಗಳು ನಮಗೆ ನಿಜವಾಗಿ ಆಶ್ಚರ್ಯಜನಕವಾಗಿದೆ. ಈ ಕಾರಣದಿಂದ ಅಪಘಾನರು ಭಾರತವನ್ನು ಗೌರವಾದರಗಳಿಂದ ಕಾಣುತ್ತಿರುವದು ಇತ್ತೀಚಿನ ಅವರ ರೂಢಿಯಾಗಿಬಿಟ್ಟದೆ. ಸ್ನೇಹ ಸೌಹಾರ್ದ ಬೆಳೆಸಲು ಭಾರತಕ್ಕೆ ಶಿಷ್ಟಮಂಡಲವೇ ಮುಂತಾದವುಗಳ ಮೂಲಕ ಅಪಘಾನರು ಬರುತ್ತಿರುವದು ಸಂತೋಷದ ವಿಷಯ. ಅಬಾಧಿತವಾದ ಚಿರ ಮೈತ್ರಿಯನ್ನು ಅಪಘಾನವು ಭಾರತದೊಂದಿಗೆ ಸಾಧಿಸುವಂತಾದರೆ, ಅದಕ್ಕಿಂತ ಮಿಗಿಲಾದದ್ದು ಯಾವದು.

## ಹಿಂದುಗಳಲ್ಲಿ ಪ್ರೇಮ

ಇಂದಿನ ಪ್ರಜಾಪ್ರಿಯ ಜಹೀರ ಬಾದಶಹನು ಆಪಘಾನದ ಹಿಂದುಗಳ ಧರ್ಮಸ್ವಾತಂತ್ರ್ಯಗಳ ಕುರಿತು ಗೌರವ ತೋರಿಸುತ್ತಿದ್ದ ವಿಷಯವು ಜಾತ್ಯಂಧರಿಗೆ ಮಾರ್ಗದರ್ಶಕವಾಗಿದೆ. ಅಲ್ಲಿಯ ಹಿಂದೂ ದೇವಾಲಯಗಳ ಪುನರುದ್ಧಾರಕ್ಕಾಗಿ ಧನಸಹಾಯವನ್ನು ಸಲ್ಲಿಸುತ್ತಿರುವನು. ಆದ್ದರಿಂದ ಅಲ್ಲಿಯ ಹಿಂದುಗಳು ಪಾಕಿಸ್ಥಾನದಲ್ಲಿರುವಂತೆ ಇಲ್ಲ. ತುಸು ಹೆಚ್ಚು ಕಡಿಮೆ ಭಾರತದಲ್ಲಿರುವಂತೆ ಇದ್ದಾರೆ. ಇದಕ್ಕೆ ಒಂದು ಉದಾಹರಣೆಯನ್ನೂ ನೇತಾಜಿ ಸುಭಾಸರಿಂದ ತಿಳಿಯಬಹುದು. ಭಾರತದಿಂದ ಬ್ರಿಟಿಷರ ಕಣ್ಣಿಗೆ ಅಂಜನ ಹಾಕಿ ಹೊರಟ ನೇತಾಜಿ ಸುಭಾಸರಿಗೆ ಕಾಬೂಲು-ಇವಫಕೀರದ ಪಠಾಣ ಬಂಧುಗಳ ಉದಾರಾಶ್ರಯವು ದೊರೆಯದಿದ್ದರೆ ಸುಭಾಸರ ಗತಿ ಏನಾಗುತ್ತಿತ್ತೆಂದು ಹೇಳಲು ಅಸಾಧ್ಯ. ಆಗ ಅಪಘಾನರು ಪ್ರಾಣದಂತೆ ನೇತಾಜಿ ಭೋಸರನ್ನು ನೋಡಿಕೊಂಡರು. ಇದರ ನಿದರ್ಶನವಾಗಿ "ಕಾಬೂಲೀ ಭೋಸ್"ರ ರೋಮಾಂಚಕವಾದ ಭಾವ ಚಿತ್ರವು ನೆನಪಿಸುತ್ತದೆ. ಅಂತೂ

ಭಾರತದೊಂದಿಗೆ ಅಪಘಾನವು ಭ್ರಾತೃ ಭಾವನೆಯಿಂದ ಬೆರೆಯು ತ್ತಿದೆಯನ್ನಲಡ್ಡಿಯಿಲ್ಲ. ಕೆಲವು ಅಪಘಾನೀ ಮೇಧಾವಿಗಳು ಭಾರತ ದಿಂದ ರಾಜಕೀಯ ಹಂಬಲು ಬೇರಾದರೂ ಪ್ರೇಮದ ಅಂಬಲಿ ಒಂದೇ ಎನ್ನುತ್ತಿದ್ದಾರೆ. ಒಂದು ಕಾಲದ ನಮ್ಮೊಳಗಿನ ಅಫಘಾನವು ಸಿಡಿದು ಬೇರೆಯಾಗಿ ಇಂದು ಅವರ ಸ್ನೇಹ ಮೂಲಕ ನೆರೆಯ ಗಾಂಧಾರ ಅನ್ನುವಂತಾಯಿತು. ಕಾಲಚಕ್ರದ ಉರುಳು ಹೇಗೆ ತಿರುಗುವದೆಂದು ಯಾರಿಗೆ ಗೊತ್ತು.

---

ಕನ್ನಡದಲ್ಲಿ ಮೊದಲನೆಯದೆಂದೇ ಹೇಳಬಹುದಾದ
ಅಣುಶಕ್ತಿಯ ಸಚಿತ್ರ ವಿವೇಚನಾ ಗ್ರಂಥ

# ಹಿರೋಶಿಮಾದಿಂದ ಜಿನೇವ

ಬರೆದವರು:
**ಶ್ರೀ. ಯು. ರಾಘವೇಂದ್ರ ಆಚಾರ್ಯ, ಎಂ. ಎ.,**
ನವಡೆಹಲಿ.

ಮುನ್ನುಡಿಕಾರರು:
**ಶ್ರೀ. ಶಿವರಾಮ ಕಾರಂತರು.**

ಪ್ರತಿಯೊಬ್ಬರೂ ಓದಲೇಬೇಕಾದ ನವೀನ ಗ್ರಂಥ.

ಉತ್ತಮ ಕಾಗದ. ಬೆಲೆ: ರೂ. ೧-೮-೦

●

**ಹೊಸಕೆರೆ ಚಿದಂಬರಯ್ಯನವರ**

# ಗೀತೆಯ ಕೈಗನ್ನಡಿ

**ಭಗವದ್ಗೀತೆಯ ಸಮೂಲ ಭಾಷಾಂತರ**

**ಪೊಕೆಟ್ ಎಡಿಷನ್**

ಸುಮಾರು 450 ಪುಟಗಳು. ಕ್ರಯ: ರೂ. 0-12-0

**ನವಯುಗ ಪ್ರೆಸ್, ಉಡುಪಿ**